# ಅಚಲ

ನವೆಂಬರ್ 2000

ತಿಂಗಳ ಪತ್ರಿಕೆ

ಒಳಗೇನಿದೆ?



ಜಾಗೃತಿ

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 15 ಸಂಚಿಕೆ - 9

ಸಂಪಾದಕ ಮಂಡಲಿ

ಎನ್. ಗಾಯತ್ರಿ

ನೇಮಿಚಂದ್ರ, ದೇವಿ,

ಬಿ. ಎನ್. ಸುಮಿತ್ರಾಬಾಯಿ

ಶಾಂತಾನಾಗರಾಜ್

ಹೆಚ್. ಎನ್: ಗೀತಾ

ಹೇಮಲತಾ ಮಹಿಷಿ

ಪ್ರಕಾಶಕರು

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.

ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


Achala - Edited by
Dr. N. Gayathri

Published by
Dr. G. Ramakrishna on behalf of Jagruthi Mahila Adhyayana Kendra

*Printed at*
Lipi Mudrana
Bangalore - 560 004


ಆತ್ಮೀಯರೇ,

ಕಳೆದ 15 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

**ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ.ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ. ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.**

ಅಚಲದ ಚಂದಾ ವಿವರಗಳು ಹೀಗಿವೆ :

ವಾರ್ಷಿಕ ಚಂದಾ : ರೂ. 40/- (ವ್ಯಕ್ತಿಗಳಿಗೆ)

ರೂ. 75/- (ಸಂಸ್ಥೆಗಳಿಗೆ)

ಅಜೀವ ಚಂದಾ : ರೂ. 300/- (ವ್ಯಕ್ತಿಗಳಿಗೆ)

ರೂ. 400/- (ಸಂಸ್ಥೆಗಳಿಗೆ)

ಗಮನಿಸಿ

ಅಚಲ ವಿಳಾಸ ಬದಲಾಗಿದೆ

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

# ಹೆಚ್ಚುತ್ತಿರುವ ಅತ್ಯಾಚಾರ ; ಮರೀಚಿಕೆಯಾಗುತ್ತಿರುವ ನ್ಯಾಯ.

ಈ ವರ್ಷ ಜುಲೈ ತಿಂಗಳಲ್ಲಿ ರಾಜಸ್ಥಾನದ ಅಲವಾರಾ ಜಿಲ್ಲೆಯಲ್ಲಿ ಹದಿನೇಳು ವರ್ಷದ ವಿವಾಹಿತ ತರುಣಿಯ ಮೇಲೆ ನಡೆದ ಸಾಮೂಹಿಕ ಅತ್ಯಾಚಾರದ ಘಟನೆ ಯಾರೂ ಮರೆಯಲಾಗದ ದುಃಸ್ವಪ್ನವಾಗಿದೆ. ಅಲವಾರಾ ಜಿಲ್ಲೆಯಲ್ಲಿ ಪ್ರಖ್ಯಾತ ಯಾತ್ರಾ ಸ್ಥಳ ಭೃಥರಿ ದೇವಾಲಯದಲ್ಲಿ ಜುಲೈ 20 ರಂದು ದೇವಾಲಯದ ಅರ್ಚಕರೂ ಸೇರಿದಂತೆ ಒಟ್ಟು ಹನ್ನೊಂದು ಮಂದಿ ಹದಿನೇಳು ವರ್ಷದ ವಿವಾಹಿತ ತರುಣಿಯ ಮೇಲೆ ನಡೆಸಿದ ಅತ್ಯಾಚಾರ ಇಡೀ ಮನುಕುಲವೇ ನಾಚಿಕೆ ಪಟ್ಟುಕೊಳ್ಳುವಂತಹುದು. ದರ್ಬಾರ್‌ಪುರ್ ಜಿಲ್ಲೆಗೆ ಸೇರಿದ ಈ ದಲಿತ ಯುವತಿ ತನ್ನ ಸೋದರಿಯ ಮನೆಗೆಂದು ಬಸನಾ ಗ್ರಾಮಕ್ಕೆ ಹೊರಟಿದ್ದಳು. ಅವಳೊಡನೆ ಬೆಂಗಾವಲಾಗಿ ಅವಳ ಸೋದರಿಯ ಇಬ್ಬರು ಪುತ್ರರು ಮುಖೇಶ್ ಸಹೋದರರು ಕೂಡಿಕೊಂಡರು. ದಾರಿಯಲ್ಲಿ ತಮ್ಮ ಸ್ನೇಹಿತನನ್ನು ಸೇರಿಸಿಕೊಂಡರು. ದಾರಿಯಲ್ಲಿ ದೇವಾಲಯಕ್ಕೆ ಹೋಗಿ ನಂತರ ಅಲ್ಲಿನ ಧರ್ಮಶಾಲೆಯಲ್ಲಿಯೇ ಕೋಣೆಯೊಂದನ್ನು ಬಾಡಿಗೆಗೆ ಹಿಡಿದರು. ರಾತ್ರಿ ಮಲಗಿರುವಾಗ ಕೋಣೆಯ ಬಾಗಿಲು ಬಡಿದು ಹೊರಗಿದ್ದ ಮೂವರೂ ಅವಳ ಕೋಣೆಯನ್ನು ಪ್ರವೇಶಿಸಿ ಅವಳ ಮೇಲೆ ಹಿಡಿತ ಸಾಧಿಸಿ ಅತ್ಯಾಚಾರ ನಡೆಸಿದರು. ಈ ಗಲಾಟೆ ಕೇಳಿ ಅಲ್ಲಿಗೆ ಧಾವಿಸಿ ಬಂದ ಇಬ್ಬರು ಅರ್ಚಕರು ಪ್ರಪನ್ನ ಶಾಸ್ತ್ರಿ ಮತ್ತು ಸಂತೋಷ್ ತಿವಾರಿ ಪರಿಸ್ಥಿತಿಯ ಲಾಭ ಪಡೆಯಲು ತಾವೂ ಈ ಕೃತ್ಯದಲ್ಲಿ ಜೊತೆಗೂಡಿದರು. ಆಗ ಅಲ್ಲಿಯೇ ಇದ್ದ ಅಂಗಡಿಯ ಮಾಲೀಕ ಹನುಮಾನ್ ತಿವಾರಿಯೂ ತಾನೂ ಇವರ ಜೊತೆಗೂಡಿದ. ಈ ಎಲ್ಲ ಗದ್ದಲದಿಂದ ಕುತೂಹಲಗೊಂಡ ಆ ದೇವಾಲಯದ ಸಾಲಿನಲ್ಲಿದ್ದ ಆರು ಮಂದಿ ಅಂಗಡಿಯವರು ಆ ಸ್ಥಳಕ್ಕೆ ಧಾವಿಸಿ ಬಂದರು. ಆಗ ಆ ಮಹಿಳೆಯನ್ನು ರಕ್ಷಿಸುವ ಬದಲು ತಮಗೂ ಅವಕಾಶ ಕೊಡದಿದ್ದರೆ ಗಲಾಟೆ ಮಾಡುವುದಾಗಿ ಅವಳನ್ನು ಅಲ್ಲಿಂದ ಮಾಳಿಗೆಗೆ ವರ್ಗಾಯಿಸಿ ಅವರೂ ಈ ಪಾಪಕೃತ್ಯದಲ್ಲಿ ಭಾಗಿಯಾದರು. ಆ ಹೆಣ್ಣಿನ ಆರ್ತನಾದ ಯಾರಿಗೆ ಕೇಳಬೇಕು ?. ಮಾಳಿಗೆಯಲ್ಲಿದ್ದ ಇಷ್ಟೊಂದು ಜನ ಸಮೂಹವನ್ನು ಕಂಡು ದಾರಿಯಲ್ಲಿ ಹೋಗುತ್ತಿದ್ದ ನಾಲ್ವರು ಭಕ್ತಾದಿಗಳು ತಮ್ಮ ಕೈಯಲ್ಲಿದ್ದ ಟಾರ್ಚ್ ಹಾಕಿ ಆ ಹುಡುಗಿಯ ನೆರವಿಗೆ ಬರುವ ವೇಳೆಗೆ ಅವಳು ಮೂರ್ಛಾವಸ್ಥೆಯಲ್ಲಿದ್ದಳು. ಅತ್ಯಾಚಾರಿಗಳು ಅಲ್ಲಿಂದ ಕಂಬಿಕಿತ್ತಿದ್ದರು. ಕತ್ತಲ ಗರ್ಭದೊಳಗಿಂದ ಮೂಡಿ ಬಂದ ಈ ಹೆಣ್ಣಿನ ಕಥೆ ಸಿನಿಮಾ ಕತೆಯಂತೆ ಗೋಚರಿಸಿದರೂ ಇದು ಹೆಣ್ಣಿನ ನೈಜ ಕಥೆ. ಹೆಣ್ಣನ್ನು ತನ್ನ ಕುಟುಂಬದವರೇ ನಂಬಿಸಿ ಮೋಸಗೊಳಿಸಿದ ಕತೆ. ದೇವರ ಕಾಯಕದಲ್ಲಿ ತೊಡಗಿರುವ ಪುರೋಹಿತ ಮಂದಿಯೂ ಶಾಮೀಲಾದ ಕತೆ. ಒಟ್ಟಾರೆ ಮನುಷ್ಯನ ವಿಕೃತ ಮನಸ್ಸಿಗೆ ಬಲಿಯಾದ ಹೆಣ್ಣಿನ ಕತೆ.

ಭಾರತೀಯರ ಪುಣ್ಯ ಸ್ಥಳವಾದ ವಾರಣಾಸಿಯ ಶಿವಪುರದಲ್ಲಿ ಅಲ್ಲಿನ ಸರ್ಕಾರ ನಿರ್ವಹಿಸುವ ಬಾಲಕಿಯರ ರಕ್ಷಣಾ ಗೃಹಗಳ ಅವ್ಯವಹಾರದ್ದು ಮತ್ತೊಂದು ಘೋರ ಕತೆ. ಈ ರಕ್ಷಣಾಗೃಹಗಳ ಮುಖ್ಯಸ್ಥೆ ಶ್ಯಾಮಾ ಸಿಂಗ್ ಅಲ್ಲಿನ ಹೆಣ್ಣುಮಕ್ಕಳನ್ನು ರಾಜಕಾರಣಿಗಳಿಗೆ, ಅಧಿಕಾರಿಗಳಿಗೆ ಸರಬರಾಜು ಮಾಡುವ ಕಾರ್ಯಕ್ಕೆಂದೇ ನೇಮಿಸಲ್ಪಟ್ಟಂತೆ ವರ್ತಿಸುತ್ತಿರುವ ರೀತಿ ನಾಚಿಕೆಗೇಡಿನದು. ತಮ್ಮ ಮೇಲಾಗುವ ದೌರ್ಜನ್ಯವನ್ನು ಪ್ರತಿಭಟಿಸಿದ ಹೆಣ್ಣು ಮಕ್ಕಳಿಗೆ ಕಿರುಕುಳ, ದೌರ್ಜನ್ಯ, ಕೊನೆಗೆ ಸಾವೂ ಕಟ್ಟಿಟ್ಟ ಬುತ್ತಿ. ಹಲವಾರು ಕಾರಣಗಳಿಗಾಗಿ ನಿರಾಶ್ರಿತರಾಗಿ ಅಸಹಾಯಕ ಸ್ಥಿತಿಯಲ್ಲಿ ಈ ರಕ್ಷಣಾಗೃಹಗಳನ್ನು ಸೇರಿದ ಹೆಣ್ಣು ಮಕ್ಕಳ ಬದುಕು ಬೆಂಕಿಯಲ್ಲಿ ಬಾಳಬೇಕಾದ ಆತಂಕದ ಬದುಕು. ರಾಜ್ಯ ಸರ್ಕಾರದ ಮಹಿಳಾ ಕಲ್ಯಾಣ ಇಲಾಖೆಯೇ ನಡೆಸುವ ರಕ್ಷಣಾಗೃಹದಲ್ಲಿ ನಿರಂತರವಾಗಿ ನಡೆಯುತ್ತಾ ಬಂದ ಹೆಣ್ಣಿನ ಮಾರಾಟಕ್ಕೆ ಕುತ್ತು ಬಂದು ಅಪರಾಧಿಗಳು ಬೆಳಕಿಗೆ ಬಂದದ್ದೂ ಇತ್ತೀಚೆಗೆಯೇ.

ಕಳೆದ ಮೇ ತಿಂಗಳಲ್ಲಿ ಈ ಪಾಪಕೂಪದಿಂದ ತಪ್ಪಿಸಿಕೊಂಡು ಹೊರಬಂದ ಹದಿಮೂರು ವರ್ಷದ ಬಾಲೆ ರೂಬಿಸಿಂಗ್ ಶಿವಪುರದ ಪೋಲಿಸ್ ಠಾಣೆಗೆ ಬಂದು ತನ್ನ ಗೋಳಿನ ಕತೆಯನ್ನು ಹೇಳಿಕೊಂಡಾಗ ರಕ್ಷಣಾಗೃಹದ ಎಲ್ಲ ಕೊಳಕು ದುರ್ನಾತವೂ ಹೊರಬಿತ್ತು. ಕೂಡಲೇ ಕಾರ್ಯಾಚರಣೆ ನಡೆಸಿದ ಪೋಲಿಸರು ಇದುವರೆಗೂ ಹನ್ನೆರಡು ಮಂದಿಯನ್ನು ಬಂಧಿಸಿದ್ದಾರೆ. ಅವರಲ್ಲಿ ಆ ರಕ್ಷಣಾಗೃಹದ ವಾರ್ಡನ್ ಶ್ಯಾಮಾ ಸಿಂಗ್, ಅವಳ ಮಗ ಯಶವಂತ್‌ಸಿಂಗ್, ವಿಪುಲ್‌ಸಿಂಗ್ (ಸ್ಥಳೀಯ ಬಿ.ಜೆ.ಪಿ ಯುವ ನಾಯಕ), ಶಹೀದ್ ಪರ್‌ವೀಜ್ (ಸ್ಥಳೀಯ ಕಾಂಗ್ರೆಸ್ ಮುಖಂಡ) ಮತ್ತು ಎಸ್.ಕೆ. ಮಿಶ್ರಾ (ಜಿಲ್ಲಾ ಹಿರಿಯ

ಅಧಿಕಾರಿ) ಪ್ರಮುಖರು. ಇನ್ನು ಕೆಲವು ರಾಜಕೀಯ ಧುರೀಣರಿಗೆ ಅಲಹಾಬಾದ್ ಹೈಕೋರ್ಟು ಜಾಮೀನು ನೀಡಿ ಖುಲಾಸೆ ಮಾಡಿದೆ. ಈ ರಕ್ಷಣಾಗೃಹದ ಎಂಟು ಮಂದಿ ಮಹಿಳೆಯರಿಂದ ಪೋಲೀಸರು ಮಾಹಿತಿಗಳನ್ನು ಸಂಗ್ರಹಿಸಿದ್ದಾರೆ, ಹೇಳಿಕೆಗಳನ್ನು ಪಡೆದಿದ್ದಾರೆ. ಅವರು ನಿವೇದಿಸಿದ ಕತೆಯಂತೂ ಘೋರವಾಗಿದೆ ಮತ್ತು ಈ ರಕ್ಷಣಾಗೃಹದ ಕಾರ್ಯವೈಖರಿಯ ಹಲವಾರು ಕ್ರೂರ ಸತ್ಯಗಳನ್ನು ಬಯಲು ಮಾಡುತ್ತದೆ. ಶಿವಪುರದ ಗೋಡೆಗಳಲ್ಲಿ 'ಸರ್ಕಾರ ನಡೆಸುತ್ತಿರುವ ವೇಶ್ಯಾವಾಟಿಕೆ' ಎಂಬ ಪೋಸ್ಟರ್‌ಗಳು ರಾರಾಜಿಸುತ್ತಿವೆ. ಭಾರತೀಯ ಸಂಸ್ಕೃತಿಯ ವೈಭವೀಕರಣಕ್ಕೆ ಎಂತಹ ಮರ್ಯಾದೆಯ ಲಾಂಛನ ಎಂಬ ದುರಂತ ಇಲ್ಲಿ ಹೊಡೆದು ಕಾಣುತ್ತಿದೆ.

ಈ ಎರಡು ಪ್ರಕರಣಗಳು ಇಂದು ನಮ್ಮ ಸಮಾಜದಲ್ಲಿ ಹೆಚ್ಚುತ್ತಿರುವ ಅತ್ಯಾಚಾರ ಪ್ರಕರಣಗಳ ಒಂದು ಸಣ್ಣ ನಿದರ್ಶನವಾದರೆ, ಇತ್ತೀಚೆಗೆ ಸುಪ್ರೀಂಕೋರ್ಟು ಅತ್ಯಾಚಾರದ ಆರೋಪಿಗಳ ಸಂಬಂಧದಲ್ಲಿ ನೀಡಿರುವ ತೀರ್ಪು ನಿಜಕ್ಕೂ ಆಘಾತಕಾರಿಯಾದುದು. ಮಹಾರಾಷ್ಟ್ರ ಸರ್ಕಾರ ಮತ್ತು ಸುಧಾಕರ್ ಪ್ರಕರಣದಲ್ಲಿ ಸಾಕಷ್ಟು ಸಾಕ್ಷ್ಯಾಧಾರಗಳು ಇಲ್ಲವೆಂದು ಹೇಳಿ ಕೇಸನ್ನು ವಜಾ ಮಾಡಿರುವುದು ನೊಂದ ಮನಗಳಿಗೆ ಮತ್ತಷ್ಟು ಪೆಟ್ಟು ಕೊಟ್ಟಂತಾಗಿದೆ. ಕೇವಲ ಸಾಕ್ಷಿಗಳನ್ನಾಧರಿಸಿದ, ಆದರೆ ಸಾಮಾಜಿಕ ಸನ್ನಿವೇಶವನ್ನು ಗಮನಿಸಿದ ಇಂತಹ ಸಂದರ್ಭಗಳು ಇಂದು ಹೆಚ್ಚಾಗುತ್ತಿವೆ. ಈ ಪ್ರಕರಣ ನಡೆದ ನಂತರ ಐದು ತಿಂಗಳಲ್ಲಿ ಅತ್ಯಾಚಾರಕ್ಕೊಳಗಾದ ರಾಖಿ ಆತ್ಮಹತ್ಯೆ ಮಾಡಿಕೊಂಡಿದ್ದಾಳೆ, ಇದಕ್ಕೆ ಮುಂಚೆ ಪ್ರಿಯದರ್ಶಿನಿ ಮಟ್ಟೂ ಪ್ರಕರಣದಲ್ಲಿಯೂ ಪ್ರಿಯದರ್ಶಿನಿಯು ಅತ್ಯಾಚಾರಕ್ಕೊಳಗಾಗಿ ಕೊಲೆಯಾಗಿದ್ದರೂ ಈ ಪ್ರಕರಣದಲ್ಲಿಯೂ ಟ್ರಯಲ್ ಕೋರ್ಟಿನಲ್ಲಿ ಆರೋಪಿಗೆ ಶಿಕ್ಷೆಯಾಗದೆ ಹೋಯಿತು.

ಹೀಗೆ ಹೆಣ್ಣಿನ ಮೇಲಿನ ಹಿಂಸೆಯ ಪ್ರಕರಣಗಳು ದಿನದಿಂದ ದಿನಕ್ಕೆ ಹೆಚ್ಚುತ್ತಲೇ ಇವೆ. ಅಧಿಕಾರ ಮತ್ತು ಹಣವುಳ್ಳವರ ಬೆಂಬಲವಿರುವ ಆರೋಪಿಗಳು ಶಿಕ್ಷೆಯಿಂದ ಮುಕ್ತರಾಗುತ್ತಿದ್ದಾರೆ. 1999ರಲ್ಲಿ ಹೆಣ್ಣಿನ ಮೇಲಿನ ಹಿಂಸೆಯ ಪ್ರಕರಣಗಳು 1,31,1332 ದಾಖಲಾಗಿದ್ದರೆ, ಇದು 1997ರಲ್ಲಿ 1,21,265 ಮಾತ್ರ ಇತ್ತು. ಇವೆಲ್ಲ ಸರ್ಕಾರಿ ಅಂಕಿ ಸಂಖ್ಯೆಗಳು. ಇಲ್ಲಿ ದಾಖಲಾಗದೇ ಹೋದ ಪ್ರಕರಣಗಳೆಷ್ಟೋ ! ಹಲವಾರು ಹಿಂಸೆಯ ಪ್ರಕರಣಗಳೂ ಸುದ್ದಿಯಾಗದೇ ದಾಖಲಾಗದೇ ಹೋಗುತ್ತವೆ. ಆದ್ದರಿಂದ ನಮಗೆ ಮೇಲೆ ಗೋಚರಿಸುವುದಕ್ಕಿಂತ ಈ ಸಮಸ್ಯೆ ಇನ್ನೂ ಭಯಂಕರವಾಗಿದೆಯೆಂದೇ ತೋರುತ್ತದೆ.

ನ್ಯಾಷನಲ್ ಕ್ರೈಮ್ ರೆಕಾಡ್ ಬ್ಯೂರೋನವರು ಸಂಗ್ರಹಿಸಿರುವ ಮಾಹಿತಿಯಂತೆ ಅತ್ಯಾಚಾರ ಪ್ರಕರಣಗಳು ದಿನದಿಂದ ದಿನಕ್ಕೆ ಹೆಚ್ಚಾಗುತ್ತಲೇ ಇದೆ. ಆದರೆ ಶಿಕ್ಷೆಗೊಳಗಾಗಬೇಕಾದ ಆರೋಪಿಗಳ ಸಂಖ್ಯೆ ಕಡಿಮೆಯಾಗುತ್ತಲೆ ಇವೆ. 1997ರಲ್ಲಿ ಈ ದೇಶದಲ್ಲಿ ದಾಖಲಾದ ಅತ್ಯಾಚಾರ ಪ್ರಕರಣಗಳ ಸಂಖ್ಯೆ 15330. 1999ರಲ್ಲಿ ಇದು ಕೊಂಚ, ಅಂದರೆ 14675ರಷ್ಟು ಕಡಿಮೆಯಾಯಿತು. ಇವರುಗಳಲ್ಲಿ 32362 ಆರೋಪಿಗಳು ಮಾತ್ರ ಶಿಕ್ಷೆಗೊಳಗಾದವರು ಮತ್ತು ಉಳಿದ 163073 ಅನುಮಾನದ ಆಧಾರದ ಮೇಲೆ ಖುಲಾಸೆಯಾದರು. ಗೃಹಸಚಿವ ಇಲಾಖೆಯೇ ಒಪ್ಪಿಕೊಳ್ಳುವಂತೆ ಶೇಖಡ 36.5ರಿಂದ ಶೇಖಡ 33.8 ರಷ್ಟಕ್ಕೆ ಆರೋಪಿಗಳ ಶಿಕ್ಷೆಯ ಪ್ರಮಾಣ ಇಳಿಮುಖವಾಗಿದೆ. 1988 ರಿಂದ 1992 ರಲ್ಲಿ ಯೂನಿಯನ್ ಇಂಡಿಯ V/S ಬುಧ್‌ಸಿಂಗ್ ಪ್ರಕರಣದಲ್ಲಿ ಸರ್ವೋಚ್ಚನ್ಯಾಯಾಲವು ಪ್ರಕಟಿಸಿರುವ ಅಂಶಗಳು ಗಮನಾರ್ಹ: ''ಇತ್ತೀಚಿನ ವರ್ಷಗಳಲ್ಲಿ ಮಹಿಳೆಯರ ಮೇಲೆ ದೌರ್ಜನ್ಯದ ಪ್ರಕರಣಗಳು ಹೆಚ್ಚುತ್ತಾ ಹೋಗುತ್ತಿವೆ. ಆದ್ದರಿಂದ ಆರೋಪಿಗಳಿಗೆ ತಕ್ಕ ಶಿಕ್ಷೆಯಾಗದಿದ್ದರೆ ಅಪರಾಧಗಳ ಸಂಖ್ಯೆಯು ಹೆಚ್ಚುತ್ತಾ ಹೋಗುತ್ತದೆ.''

ಇವತ್ತಿನ ನಿರಾಶಾದಾಯಕ ಹಾಗೂ ಭಯಂಕರ ವಾತಾವರಣದಲ್ಲಿ ಲೈಂಗಿಕ ಕಿರುಕುಳಗಳಿಗೆ ತುತ್ತಾಗುತ್ತಿರುವ ಮಹಿಳೆಯರು ಕೆಳ ಜಾತಿ, ವರ್ಗಗಳಿಂದ, ಆದಿವಾಸಿ ಬುಡಕಟ್ಟು ಜನಾಂಗಗಳಿಂದ ಬಂದವರೆ ಹೆಚ್ಚಾಗಿದ್ದಾರೆ. ಆದ್ದರಿಂದ ಇಂದು ನಮ್ಮ ದೇಶದಲ್ಲಿ ನ್ಯಾಯಾಂಗವು ಹೆಚ್ಚು ಸಂಕಲ್ಪಬದ್ಧವಾಗಿ ಆರೋಪಿಗಳಿಗೆ ತಕ್ಕ ಶಿಕ್ಷೆಯನ್ನು ನೀಡುವುದರಿಂದ ಈ ಕೃತ್ಯಗಳಲ್ಲಿ ತೊಡಗುವವರಿಗೆ ಒಂದು ಪಾಠವಾದಂತಾಗಿದೆ.

- ಎನ್. ಗಾಯತ್ರಿ

# ನಿಲ್ಲದ ವರದಕ್ಷಿಣೆ ಸಾವುಗಳು

ದಿಲ್ಲಿಯ ಮನೆಯೊಂದರ ತಾರಸಿಯ ಮೇಲಿದ್ದ ಕೊಳಕು ದುರ್ನಾತದ ಕೊಟ್ಟಿಗೆಯಂತಹ ಕೋಣೆಗೆ ಪೋಲಿಸರು ದಾಳಿ ಇಟ್ಟಾಗ, ಆಕೆ ಮೂಳೆಯ ಮೇಲಿನ ಚರ್ಮದ ಹೊದಿಕೆಯಂತಿದ್ದಳು. ಕೇವಲ ಇಪ್ಪತ್ತು ಕೆ.ಜಿ ತೂಗಿದ ಈ 22 ವರ್ಷದ ಹುಡುಗಿ ಜ್ಯೋತಿ, ತನ್ನ ನರಕದ ಕುಳಿಯಿಂದ ಸಾವು ಮಾತ್ರ ನನಗೆ ಬಿಡುಗಡೆ ಒದಗಿಸಬಹುದು ಎಂದು ಭಾವಿಸಿದ್ದಳು. ಇಲ್ಲಿಯವರೆಗೂ ಯಾರೊಬ್ಬರೂ, ಆಕೆಯ ಕುಟುಂಬದವರು ಕೂಡಾ ಆಕೆಗೆ ಈ ನರಕದ ಕೊಟ್ಟಿಗೆಯಿಂದ ಬಿಡುಗಡೆ ಕೊಡಿಸಿರಲಿಲ್ಲ. ಆಕೆಯನ್ನು ಈ ಕೋಣೆಯಲ್ಲಿ ಕೂಡಿ ಬೀಗ ಹಾಕಿ ಎರಡು ವರ್ಷಗಳಾಗಿದ್ದವು. ದಿನಕ್ಕೆ ಎರಡು ರೊಟ್ಟಿಗಳನ್ನು ಎಸೆದು ಅದರಲ್ಲಿ ಆಕೆ ಜೀವ ಹಿಡಿದಿದ್ದಳು. ಇಂತಹ ಯಮಯಾತನೆಗೆ ಕಾರಣ ಆಕೆ ತಂದ ವರದಕ್ಷಿಣೆಯಲ್ಲಿ 50,000 ಕಡಿಮೆ ಇತ್ತು ಎಂಬುದು. ಆಕೆಯ ವಿಧವೆ ತಾಯಿ ಹೆಚ್ಚಿನ ವರದಕ್ಷಿಣೆ ಜೋಡಿಸಲು ಸಾಧ್ಯವಿರಲಿಲ್ಲ ಎಂಬುದು ಬೇರೆ ಮಾತು. ಆಸ್ಪತ್ರೆಯ ಹಾಸಿಗೆಯಿಂದ ಮೊದಲ ಬಾರಿಗೆ ಬಿಡುಗಡೆಯ ಗಾಳಿಯನ್ನು ಹೀರಿ ಪಿಸುದನಿಯಲ್ಲಿ ಜ್ಯೋತಿ ಉಸುರಿದ್ದು ಹೀಗೆ - 'ಅವರು ನನಗೆ ದಿನಕ್ಕೆ ಎರಡು ರೊಟ್ಟಿ ಕೊಡುತ್ತಿದ್ದರು. ದಿನಬಿಟ್ಟು ದಿನ ಒಂದಿಷ್ಟು ನೀರು ಕೊಡುತ್ತಿದ್ದರು. ನಾನು ಆ ಕೊಟ್ಟಿಗೆಯಲ್ಲಿಯೇ ತಿಂದು, ಮಲಗಿ ಹೇಲುತ್ತಾ ಕಳೆದ ದಿನಗಳ ಎಣಿಕೆ ತಪ್ಪಿದೆ.

ವರದಕ್ಷಿಣೆಯ ಭೂತ ಕೇವಲ ಬಡವರನ್ನು ಕಾಡುತ್ತದೆ ಎಂದಲ್ಲ. 50,000 ರೂಪಾಯಿ ಕೊಟ್ಟೊಡನೆ ವರದಕ್ಷಿಣೆ ಭೂತ ತೃಪ್ತವಾಗುತ್ತದೆ ಎಂದೂ ಅಲ್ಲ. ದಿಲ್ಲಿಯ 25 ವರ್ಷದ ಶಾಲಿನಿ ಅಗರ್ವಾಲಳನ್ನು ಆಕೆಯ ಗಂಡ ಎರಡು ವರ್ಷದ ಮಗುವಿನ ಎದುರಲ್ಲೇ ತಲೆಗೆ ಗುಂಡಿಟ್ಟು ಕೊಂದ. ಕೊಲೆಗೆ ಕಾರಣ, ತಾನು ಹಕ್ಕಿನಿಂದ ಕೇಳಿದ್ದ 'ಲಕ್ಷುರಿ ಕಾರು' ಕೊಡಲು ಶಾಲಿನಿಯ ತಂದೆ ನಿರಾಕರಿಸಿದ್ದು. ಶಾಲಿನಿಯ ಉದ್ಯಮಿ ತಂದೆ ಅಳಿಯ ರಾಹುಲಗೆ ಕೊಟ್ಟ ಖಂಡುಗದಲ್ಲಿ 'ಓಪಲ್ ಆಸ್ಟ್ರಾ ಕಾರೂ' ಕೂಡಾ ಇತ್ತು. ಅದನ್ನು ಕಡಿಮೆ ಬೆಲೆಗೆ ಮಾರಿದ ರಾಹುಲ್, 'ಹೊಂಡಾ ಸಿಟಿ' ಕೊಂಡು ತಂದು, ಕಾರಿನ ಹಣವನ್ನು ತನ್ನ ಮಾವ ಕೊಡಬೇಕೆಂದು ತಾಕೀತು ಮಾಡಿದ. ಬಹುಶಃ 'ಹಾಳಾಗಿ ಹೋಗಲಿ' ಎಂದು ಇದನ್ನೂ ಕೊಟ್ಟು ಬಿಡುತ್ತಿದ್ದರು, ಅಷ್ಟರಲ್ಲಿ ರಾಹುಲ್ ಸಹನೆ ಕಳಕೊಂಡು ಗುಂಡಿಟ್ಟು ಕೊಂದ. ಪ್ರತಿ ಹಬ್ಬದಲ್ಲಿ, ಹುಟ್ಟುಹಬ್ಬದಲ್ಲಿ, ಮತ್ಯಾವುದೇ ಕೌಟುಂಬಿಕ ಸಮಾರಂಭದಲ್ಲಿ ಅದೆಷ್ಟೇ ಕೊಟ್ಟರು, ಅತ್ತೆ ಮನೆಯವರಿಗೆ ಸಾಲದಿತ್ತು. 'ಇಷ್ಟೇ ಕೊಟ್ಟದ್ದು' ಎಂದು ಶಾಲಿನಿಯನ್ನು ತರಾಟೆಗೆ ತೆಗೆದುಕೊಳ್ಳುವುದು ತಪ್ಪುತ್ತಿರಲಿಲ್ಲ. ಮಗಳ ಸಾವಿಗೆ ಕಣ್ಣೀರು ಸುರಿಸುತ್ತಾ, ಎರಡು ವರ್ಷದ ಮೊಮ್ಮಗಳನ್ನು ನೋಡಿಕೊಳ್ಳುತ್ತಿರುವ ಶಾಲಿನಿಯ ವಯಸ್ಸಾದ ತಾಯಿ, 'ವರದಕ್ಷಿಣೆ ಸಾವುಗಳ ಬಗ್ಗೆ ಕೇಳಿದ್ದೆ, ಆದರೆ ಅವು ನಮ್ಮಂತಹ ಕುಟುಂಬದಲ್ಲೂ ನಡೆಯಬಹುದೆಂದು ಖಂಡಿತಾ ಊಹಿಸಿರಲಿಲ್ಲ' ಎನ್ನುತ್ತಾರೆ.

ಈ ಎರಡು ಘಟನೆಗಳು, ವರದಕ್ಷಿಣೆ ವಿರೋಧಿ ಕಾನೂನುಗಳು, ಜನ ಜಾಗೃತಿ, ಸ್ತ್ರೀವಾದಿ ಚಳುವಳಿ ಎಲ್ಲದರ ನಡುವೆಯೂ ನಮ್ಮ ಸಮಾಜದಲ್ಲಿ ಗಂಡು ಹೆಣ್ಣಿನ ನಡುವೆ ಅಸಮತೋಲನದ, 'ಹಣ ಕೀಳುವ' ಸಂಬಂಧವೇ ಮುಂದುವರೆದಿದೆ ಎಂದು ತೋರಿಸುತ್ತವೆ. ವರದಕ್ಷಿಣೆ ಸಾವಿಗೆ ಜಾತಿ, ಧರ್ಮ, ಬಡವರು, ಶ್ರೀಮಂತರು ಭೇದವಿಲ್ಲ. ಅದು ಜ್ಯೋತಿಯಂತಹ ಬಡ ಹುಡುಗಿಯನ್ನೂ ಆಹುತಿ ತೆಗೆದುಕೊಳ್ಳುತ್ತದೆ, ಶಾಲಿನಿಯಂತಹ ಶ್ರೀಮಂತಳನ್ನೂ. 1998ರಲ್ಲಿ ದಾಖಲಿಸಲ್ಪಟ್ಟ ವರದಕ್ಷಿಣೆ ಸಾವಿನ ಸಂಖ್ಯೆ 6917. ಕೇವಲ ಕಾನೂನಿನಿಂದ ಇಂತಹ ಸಾಮಾಜಿಕ ಪಿಡುಗನ್ನು ಹತ್ತಿಕ್ಕಲು ಸಾಧ್ಯವಿಲ್ಲ. ಕಾರಣ ಎಲ್ಲಿಯವರೆಗೆ ಸಮಾಜದಲ್ಲಿ ವರದಕ್ಷಿಣೆ ಮಾನ್ಯತೆ ಇರುತ್ತದೆಯೋ, ಅಲ್ಲಿಯವರೆಗೆ ಈ ಪಿಡುಗಿನಿಂದ ಬಿಡುಗಡೆ ಇಲ್ಲ. ಪಾಟ್ನಾದ ಚಳುವಳಿಗಾರ್ತಿ ಸರೋಜ್ ಚೌಬೇ ಹೇಳುವಂತೆ 'ವರದಕ್ಷಿಣೆ ಸಾಮಾಜಿಕ ಮಾನ್ಯತೆ ಪಡೆದಿದೆ. ಇಲ್ಲಿ ಗುಂಡುಗಳಿಗೆ ನಿಗದಿತ ಬೆಲೆ ಚೀಟಿ ಇದೆ. ಐ.ಎ.ಎಸ್. ಅಧಿಕಾರಿಯಾಗಿದ್ದರೆ ಕನಿಷ್ಠ ಬಲೆ 10 ಲಕ್ಷ, ಗರಿಷ್ಠ ಬೆಲೆ ಎಷ್ಟು ಬೇಕಾದರೂ ಇರಬಹುದು. ಡಾಕ್ಟರ್ ಅಥವಾ ಇಂಜಿನಿಯರಗೆ 8 ಲಕ್ಷದಿಂದ 25 ಲಕ್ಷದ ವರೆಗೆ ಚೌಕಾಸಿ ಉಂಟು. ಓರ್ವ ಸರ್ಕಾರಿ ಜವಾನನಿಗೆ ಎರಡು ಲಕ್ಷ ಬೆಲೆ ಬಿಹಾರಿನಲ್ಲಿ ಎನ್ನುತ್ತಾರೆ..

ಹಿಂದೆಲ್ಲ ಮದುವೆಗೆ ಮೊದಲು ವರದಕ್ಷಿಣೆ ಇತ್ಯರ್ಥ ಆಗಿ ಹೋಗುತ್ತಿತ್ತು. ಇದೀಗ ಮದುವೆಯ ನಂತರ ಬೇಡಿಕೆಗಳು ಬರುತ್ತವೆ, ಮದುವೆಯೊಡನೆ ಮುಗಿಯದೆ ಮಗು ಹುಟ್ಟಿದಾಗ, ಹಬ್ಬ ಬಂದಾಗ, ಹುಟ್ಟುಹಬ್ಬ ಎಂದಾಗ, ಹೀಗೆ ಸಾಲಾಗಿ ಹಕ್ಕಿನಿಂದ ಕೇಳುವುದು ಏರುತ್ತಲೇ ಇದೆ. ಕೊಳ್ಳುಬಾಕ ಸಂಸ್ಕೃತಿ ಮತ್ತಷ್ಟು ಆಮಿಷಗಳನ್ನು ಪೂರೈಸುವಂತೆ ಒತ್ತಾಯಿಸುತ್ತದೆ. ಡಾ. ಶಾಂತಿ ಓಝಾ ಬರೆದಿರುವ 'ದಹೇಜ್ ಹತ್ಯಾ, ದೋಷಿ ಕೌನ್?' (ವರದಕ್ಷಿಣೆ ಸಾವು, ದೋಷಿ ಯಾರು?), 'ವರದಕ್ಷಿಣೆ ಸಾವಿಗೆ ಬಲಿಯಾದ ಮೂರರಷ್ಟು ಹೆಣ್ಣು ಮಕ್ಕಳು ವರದಕ್ಷಿಣೆ ಬೇಡಿಕೆಯಿಂದ ಹೇಳಲಸಾಧ್ಯವಾದ ಹಿಂಸೆಯನ್ನು ಅನುಭವಿಸುತ್ತಿದ್ದಾರೆ' ಎನ್ನುತ್ತಾರೆ.

ಮೊದಲನೆಯದಾಗಿ ಎಷ್ಟೆಲ್ಲ ಕಾನೂನುಗಳಿದ್ದರೂ ವರದಕ್ಷಿಣೆಗಾಗಿ ಹಿಂಸಿಸುವ, ಕೊಲ್ಲುವ ಗಂಡ ಮತ್ತು ಅತ್ತೆ ಮಾವ ಕಾನೂನಿನ ಜರಡಿಯಲ್ಲಿ ಸುಲಭವಾಗಿ ನುಣುಚಿಕೊಳ್ಳುತ್ತಾರೆ. ಪೋಲೀಸರ ಬಳಿ ದೂರು ಕೊಂಡೊಯ್ಯುವುದು, ದಾಖಲಿಸುವುದು, ಕಾನೂನು

ಸಹಾಯ ಬೇಡುವುದು ಎಲ್ಲವೂ ಹೆಣ್ಣು ಹೆತ್ತವರಿಗೆ ಪರ್ವತಾರೋಹಣವಾಗುತ್ತದೆ. ಹಾಗೂ ನ್ಯಾಯ ಬೇಕೆಂದರೆ, ಅದಕ್ಕೆ ದಶಕಗಳೇ ಕಾಯಬೇಕಾಗುತ್ತದೆ. 75 ವರ್ಷದ ಸತ್ಯ ರಾಣಿ ಚಡ್ಡಾ ಅವರ ಮಗಳು ಭೀಕರ ರೀತಿಯಲ್ಲಿ ವರದಕ್ಷಿಣೆ ಸಾವಿಗೆ ತುತ್ತಾದಳು. ನ್ಯಾಯಾಲಯದ ಮೆಟ್ಟಿಲು ಹತ್ತಿ, 21 ವರ್ಷ ಹೋರಾಡಿದ ಮೇಲೆ ಆ ತಾಯಿಗೆ ಒಂದಿಷ್ಟು ನ್ಯಾಯ ದೊರೆಯಿತು. .1979ರಲ್ಲಿ ಆರು ತಿಂಗಳ ಗರ್ಭಿಣಿಯಾಗಿದ್ದ ಆಕೆಯ ಮಗಳನ್ನು 'ಸ್ಕೂಟರ್ ಕೊಡಿಸಲಿಲ್ಲ' ಎಂಬ ಕ್ಷುಲ್ಲಕ ಕಾರಣಕ್ಕೆ ಬೆಂಕಿ ಹಚ್ಚಿ ಕೊಂದಿದ್ದರು. ಹೆಸರಿಗಿರುವ ಕಾನೂನುಗಳು ತೋರುವ ಅಸಡ್ಡೆಯ ನಡುವೆ ಈ ಮಾತೆ ಹೋರಾಡುತ್ತಿದ್ದರೆ, ಮಗಳ ಕೊಲೆಗಾರ ಆರಾಮವಾಗಿ ಮರುಮದುವೆಯಾಗಿ, ಮಕ್ಕಳು ಮಾಡಿಕೊಂಡು ತಣ್ಣಗೆ ಬದುಕಿದ್ದ. ಈಗ ಆತನಿಗೆ ದೊರೆತದ್ದು ಕೇವಲ ಏಳು ವರ್ಷಗಳ ಜೈಲುವಾಸ. ವರದಕ್ಷಿಣೆ ಕಾನೂನು ಹಲ್ಲಿಲ್ಲದ ಹುಲಿಯಾಗಿದೆ, ಯಾರನ್ನೂ ಹೆದರಿಸದಾಗಿದೆ. ಕರ್ನಾಟಕದಲ್ಲಿ ಕಳೆದ ಮೂರು ವರ್ಷಗಳಲ್ಲಿ 577 ಕೇಸುಗಳ ದಾಖಲಾದರೆ, ಅಪರಾಧ ನಿರ್ಣಯವಾಗಿರುವುದು 22 ಕೇಸುಗಳಲ್ಲಿ ಮಾತ್ರ. ಬೆಂಗಳೂರು ನಗರ ಒಂದರಲ್ಲಿಯೇ ಪ್ರತಿ ತಿಂಗಳು ನೂರು ಮಹಿಳೆಯರು ಅಸಹಜ ಸಾವಿಗೆ ಈಡಾಗುತ್ತರೆ. ಅವುಗಳಲ್ಲಿ 70 'ಸ್ಟೌವ್ ಸ್ಫೋಟ, ಅಡಿಗೆ ಮನೆಯ ಅಪಘಾತಗಳು' ಎಂದು ದಾಖಲಾಗುತ್ತವೆ.

ಹೆಣ್ಣು ಮಕ್ಕಳಿಗೆ 'ಮದುವೆಯೊಂದೇ ಮುಕ್ತಿ'ಯೆಂದು ಬೆಳೆಸುವುದು, 'ಎಂತಹ ಗಂಡನಾದರೂ ಬಾಳಬೇಕೆಂದು' ಬೋಧಿಸುವುದು, ಹಣ ಕೊಟ್ಟಾದರೂ ಗಂಡು ಕೊಂಡು ತರುವುದು ಇವೆಲ್ಲವೂ ವರದಕ್ಷಿಣೆ ಪಿಡುಗನ್ನು ಹೆಚ್ಚಿಸುತ್ತಿವೆ. 'ಡೋಲಿ ಹೊತ್ತು ಹೋದ ಮನೆಯಿಂದ ಮಗಳ ಆಸ್ತಿ ಮಾತ್ರ ಹೊರಬರಬೇಕು' ಎಂಬ ಗಾದೆಗೆ ತಕ್ಕಂತೆ ಹೆಣ್ಣು ಮಕ್ಕಳ ಆಸ್ಥಿಯಾಗಿ ಹೊರಬರುತ್ತಿದ್ದಾರೆ. ಇಂತಹ ಗಂಡ, ಅತ್ತೆ, ಮಾವಂದಿರಿಗೆ ಸಾಮಾಜಿಕ ಬಹಿಷ್ಕಾರ ಇಲ್ಲದಿರುವುದು, ಹೆಂಡತಿಯನ್ನು ಕೊಲೆ ಮಾಡಿದ ಗಂಡನಿಗೆ ಅನಾಯಾಸವಾಗಿ ಹೆಣ್ಣು ಸಿಗುವುದು, ಕಾನೂನು ಕ್ರಮ ವಹಿಸಿದವರಿಗೆ ಪ್ರತಿ ಹೆಜ್ಜೆಗೂ ಅಡೆತಡೆಗಳು ಎದುರಾಗುವುದು ಇವೆಲ್ಲವೂ ನಿಜಕ್ಕೂ ಆತಂಕಕಾರಿ ಬೆಳವಣಿಗೆಗಳು. 'ಜನ ಜಾಗೃತಿ ಮೂಡಿಸುವುದ್ಹೇಗೆ, ಕಾನೂನು ಕೆಲಸ ಮಾಡುವಂತೆ ಮಾಡುವುದ್ಹೇಗೆ' - ಮಹಿಳಾ ಹೋರಾಟಗಾರರ ಎದುರಿರುವ ದೊಡ್ಡ ಸವಾಲುಗಳು ಇವು.

## ಹಣಕ್ಕಾಗಿ, ಅನುಕೂಲಕ್ಕಾಗಿ ಸಿಸೇರಿಯನ್ !

ಒಂದು ಕಾಲಕ್ಕೆ ಸಹಜ ರೀತಿಯಲ್ಲಿ ಹೆರಿಗೆ ಆಗದಿದ್ದಾಗ ಜೀವ ಉಳಿಸಲು ಸಿಸೇರಿಯನ್ ಮಾಡುತ್ತಿದ್ದರು. ಇದೀಗ ಸಿಸೇರಿಯನ್ ಹಣಕ್ಕಾಗಿ, ಅನುಕೂಲಕ್ಕಾಗಿ ಯಥೇಚ್ಛವಾಗಿ ಜರುಗುತ್ತಿದೆ. ಮುಂಬಯಿ ಪಟ್ಟಣವೊಂದರಲ್ಲಿಯೇ ಶೇಖಡಾ 60 ರಿಂದ 70ರಷ್ಟು ಹೆರಿಗೆಗಳು ಸಿಸೇರಿಯನ್ ಹೆರಿಗೆಗಳಾಗಿರುವುದು ಒಂದು ರೀತಿ ಆತಂಕ ಹುಟ್ಟಿಸಿದೆ. ಡಬ್ಲ್ಯು.ಎಚ್.ಒ ಪ್ರಕಾರ ಹೆಚ್ಚೆಂದರೆ, ನೂರರಲ್ಲಿ 15 ಸಿಸೇರಿಯನ್ ಹೆರಿಗೆಗಳಾಗುವುದು ಸಾಮಾನ್ಯ. 'ಆದರೆ ನಗರ ಪಟ್ಟಣಗಳಲ್ಲಿ, ಖಾಸಗಿ ಆಸ್ಪತ್ರೆಗಳಲ್ಲಿ ಸಿಸೇರಿಯನ್ ಹೆರಿಗೆಗಳು ವಿಪರೀತವಾಗಿ ಹೆಚ್ಚಿವೆ' ಎನ್ನುತ್ತಾರೆ, 'ಅನಗತ್ಯ ಸಿಸೇರಿಯನ್ ಹೆರಿಗೆ - ಒಂದು ಕೇಸ್ ಸ್ಟಡಿ' ಎಂಬ ಲೇಖವನ್ನು ಬರೆದಿರುವ ಡಾ. ಮಧುಕರ್ ಪೈ. ಹಣಕ್ಕಾಗಿ, ಇಲ್ಲ ತಮ್ಮ ಅನುಕೂಲಕ್ಕಾಗಿ ವೈದ್ಯರು ಸಿಸೇರಿಯನಗೆ ಇಳಿದಿರುವುದು ತಾಯಿಯನ್ನು ಅನಗತ್ಯ ತೊಂದರೆಗೆ ನೂಕುತ್ತಿದೆ. ಯಾವುದೇ ದೊಡ್ಡ ಶಸ್ತ್ರಕ್ರಿಯೆಯಂತೆಯೇ ಸಿಸೇರಿಯನನಲ್ಲಿ ಅಪಾಯಗಳು ಇದ್ದೇ ಇರುತ್ತವೆ. ಜೊತೆಗೆ ಹೆತ್ತು ಹಗುರಾಗುವ ಬದಲು, ತಾಯಿ ನೋವಿನ ಗಾಯಗಳನ್ನು ಹೊರಬೇಕಾಗುತ್ತದೆ. 'ಜೀವ ಉಳಿಸಲು' ಮಾಡುವ ಸಿಸೇರಿಯನ್ ಹೆರಿಗೆ ಹೆಣ್ಣಿನ ಆರೋಗ್ಯದೊಡನೆ ಚೆಲ್ಲಾಟವಾಗುತ್ತದೆ. ವಿಪರ್ಯಾಸವೆಂದರೆ, ಹೆಣ್ಣು ಹೆಚ್ಚು ಆರೋಗ್ಯವಂತಳಾಗಿರುವ ಪಟ್ಟಣಗಳಲ್ಲಿ ಸಿಸೇರಿಯನ್ ಹೆರಿಗೆ ವಿಪರೀತವಾಗಿದೆ. ಹೆರಿಗೆಯಲ್ಲಿ ತಾಯಂದಿರು ಹೆಚ್ಚು ಸಾಯುವ ಹಳ್ಳಿಗಾಡುಗಳಲ್ಲಿ ನಿಜಕ್ಕೂ ಸಿಸೇರಿಯನ್ ಜೀವ ಉಳಿಸಬಲ್ಲದು. ಆದರೆ ಇಲ್ಲಿ ಸಿಸೇರಿಯನ್ ಹೆರಿಗೆಗಳು ಅತಿ ಕಡಿಮೆ ಸಂಖ್ಯೆಯಲ್ಲಿವೆ. 11,000 ಖಾಸಗಿ 'ನರ್ಸಿಂಗ್ ಹೋಮ್'ಗಳಿರುವ ಮುಂಬಯಿಯಲ್ಲಿ, ಇಂತಹ ನರ್ಸಿಂಗ್ ಹೋಂಗಳಲ್ಲಿ ಶೇಕಡಾ 40 ರಿಂದ 100ರಷ್ಟು ಸಿಸೇರಿಯನ್ ಹೆರಿಗೆಗಳಾಗುತ್ತವೆ. ಅದೇ ಸಾರ್ವಜನಿಕ ಸರಕಾರಿ ಆಸ್ಪತ್ರೆಗಳಲ್ಲಿ ಸಿಸೇರಿಯನ್ ಹೆರಿಗೆಗಳ ಸಂಖ್ಯೆ ಕೇವಲ 5 ರಿಂದ 7 ಇವೆ. ಸರಕಾರಿ ಮತ್ತು ಖಾಸಗಿ ಆಸ್ಪತ್ರೆಗಳ ನಡುವಿನ ಈ ಅಗಾಧ ವ್ಯತ್ಯಾಸವೇ, ಸಿಸೇರಿಯನ್ ಹೆರಿಗೆಗಳು ಹಣಕ್ಕಾಗಿ ನಡೆಯುತ್ತಿವೆ ಎಂದು ನೇರವಾಗಿ ತೋರುತ್ತವೆ. ಖಾಸಗಿ ಆಸ್ಪತ್ರೆಗಳಲ್ಲಿ ಸಾಧಾರಣ ಹೆರಿಗೆಗೆ 20,00 ದಷ್ಟು ಖರ್ಚು ಬಂದರೆ, ಸಿಸೇರಿಯನ್ ಹೆರಿಗೆ 70,000ದವರೆಗೂ ಹೋಗುತ್ತದೆ. ಇದಕ್ಕೆ ಉತ್ತರ ಏನು, ಪರಿಹಾರ ಏನು ಎಂಬುದು ಸ್ತ್ರೀ ಆರೋಗ್ಯದ ಬಗ್ಗೆ ಕಳಕಳಿ ಇರುವ ಎಲ್ಲರೂ ಯೋಚಿಸಬೇಕಾದ್ದು. 'ಸಿಸೇರಿಯನ್ ಹೆರಿಗೆಗೆ ಸಾಧಾರಣ ಹೆರಿಗೆಯಷ್ಟೆ ಬಿಲ್ ಮಾಡಬೇಕು' ಎಂಬ ಸಲಹೆ ಒಂದಿದೆ, ಹೀಗಾದರೆ ಸಾಧಾರಣ ಹೆರಿಗೆಯ ಬೆಲೆಯೇ ಏರಬಹುದು, ಸಿಸೇರಿಯನ್ ಇಳಿಯುವ ಸಾಧ್ಯತೆ ಇಲ್ಲ. ಬಹುಶಃ ತಾಯಿಯಾಗಲಿರುವ ಹೆಣ್ಣುಮಕ್ಕಳಲ್ಲಿ ಒಂದಿಷ್ಟು ಜಾಗೃತಿ ಮೂಡಿಸುವುದು ಸಹಾಯಕವಾಗಬಹುದು. ಯಾವ ಸಂದರ್ಭದಲ್ಲಿ ಸಿಸೇರಿಯನ್ ಅನಿವಾರ್ಯ, ಹೆರಿಗೆಯ ಹಂತಗಳಾವುವು, ಒಂದಷ್ಟು ಹೆರಿಗೆಯ ಬಗ್ಗೆ ಅನಗತ್ಯ ಭಯವನ್ನು ಆತಂಕವನ್ನು ತೊಡೆಯಲು ಪುಸ್ತಕ ಓದುವುದು, ಅನುಭವಸ್ಥರೊಡನೆ ಹಂಚಿಕೊಂಡು ಮಾತನಾಡುವುದು, ಹೆರಿಗೆಯ ವಿಷಯದಲ್ಲಿ ಆದಷ್ಟು ತಿಳಿದಿರುವುದು ಅನುಕೂಲಕ್ಕೆ ಬರಬಹುದು.

# ಪಾತಿವ್ರತ್ಯ: ಸ್ತ್ರೀ ಶೋಷಣೆಯ ನಾಲ್ಕು ಹಂತಗಳು

- ಬಿ.ಎ. ವೀರಭದ್ರಪ್ಪ

ಭಾರತೀಯರ ಜೀವನದಲ್ಲಿ ವ್ಯಕ್ತಿಯ ಶೀಲ ಮತ್ತು ಚಾರಿತ್ರ್ಯಗಳು ಬಹುಮುಖ್ಯ ಪಾತ್ರ ವಹಿಸುತ್ತವೆ. ಅದರಲ್ಲೂ ಸ್ತ್ರೀಯರ ಶೀಲಕ್ಕೆ ಸಂಬಂಧಿಸಿದ ವಿಷಯಗಳು ಸ್ತ್ರೀ ಪುರುಷರೀರ್ವರ ಗಮನವನ್ನು ವಿಶೇಷವಾಗಿ ಸೆಳೆಯುತ್ತವೆ. ಸತಿಯು ತನ್ನ ಪತಿಗೆ ನಿಷ್ಠಳಾಗಿರಬೇಕೆಂಬುದು ಸಾಮಾನ್ಯ ನಿಯಮ. ಅದೇ ರೀತಿ ಪತಿಯು ತನ್ನ ಸತಿಗೆ ಪ್ರಾಮಾಣಿಕನಾಗಿರಬೇಕೆಂಬ ಕಡ್ಡಾಯವಿಲ್ಲ. ಪುರುಷ ಪ್ರಧಾನ ಸಮಾಜದಲ್ಲಿ ಅಷ್ಟರಮಟ್ಟಿಗೆ ಅವನಿಗೆ ಸ್ವಾತಂತ್ರ್ಯವಿದೆ. ಭಾರತೀಯ ಭಾಷೆಗಳಲ್ಲಿ 'ಪತಿವ್ರತೆ' ಎಂಬ ಪದ ಬಳಕೆಯಲ್ಲಿರುವಂತೆ ಅದಕ್ಕೆ ಸಂವಾದಿಯಾಗಿ 'ಸತಿವ್ರತ' ಎಂಬ ಪದ ಬಳಕೆಯಲ್ಲಿಲ್ಲ. ಅಷ್ಟೇಕೆ, ಅದು ಅಸ್ತಿತ್ವದಲ್ಲೇ ಇಲ್ಲ. ಈ ಹಿನ್ನೆಲೆಯಲ್ಲಿ ಪ್ರತಿವ್ರತಾ ಧರ್ಮ ನಡೆದುಬಂದ ದಾರಿಯತ್ತ ನಾವು ಗಮನಹರಿಸಬಹುದು.

ರಾಮಾಯಣ, ಮಹಭಾರತಗಳನ್ನು ಭಾರತೀಯ ಮಹಾಕಾವ್ಯಗಳೆಂದು ಪರಿಗಣಿನಿಸಲಾಗುತ್ತಿದೆ. ಅವುಗಳಲ್ಲಿ ನಮ್ಮ ಐತಿಹಾಸಿಕ ಪರಂಪರೆಯನ್ನು ಗುರುತಿಸಬಹುದು. ಇಂದಿನ ನಮ್ಮ ಹಿರಿಯರು ಅತ್ಯಂತ ಪವಿತ್ರವೆಂದು ಗೌರವಿಸುವ ಪತಿವ್ರತಾ ಧರ್ಮ ಎಷ್ಟು ಪ್ರಾಚೀನವಾದುದು ಮತ್ತು ನಮ್ಮ ಋಷಿಮುನಿಗಳ ದೃಷ್ಟಿಯಲ್ಲಿ ಪಾತಿವ್ರತ್ಯವೆಂದರೇನು ಎಂಬುದನ್ನು ನಾವು ಪರಿಶೀಲಿಸೋಣ. ವಿಶ್ವಮಾನ್ಯವಾದ ರಾಮಾಯಣ, ಮಹಾಭಾರತಗಳಲ್ಲಿ ಇರಬಹುದಾದ ಚಾರಿತ್ರಿಕ ಸತ್ಯಗಳೆಷ್ಟು, ಪೌರಾಣಿಕ ಕಲ್ಪನೆಗಳೆಷ್ಟು ಎಂಬುದನ್ನು ಈ ಹಂತದಲ್ಲಿ ನಿರ್ಧರಿಸುವುದು ಸುಲಭವಲ್ಲ. ಆದರೂ ಅವುಗಳಲ್ಲಿ ಚಿತ್ರಿತವಾಗಿರುವ ಕಥೆ ಮತ್ತು ಉಪಕಥೆಗಳಿಂದ ನಮ್ಮ ಪ್ರಾಚೀನರ ಸಾಮಾಜಿಕ ಜೀವನದ ರೂಪುರೇಷಗಳನ್ನು ನಾವು ಗುರುತಿಸಬಹುದು. ಸ್ತ್ರೀ ಪುರುಷರ ಲೈಂಗಿಕ ಸಂಬಂಧಗಳ ಬಗ್ಗೆ ಆ ಪ್ರಾಚೀನ ಕಾವ್ಯಗಳು ಏನು ಹೇಳುತ್ತವೆ ಎಂಬುದನ್ನು ಕೆಲವು ಪ್ರಸಂಗಗಳ ಕಡೆಗೆ ಕಣ್ಣು ಹಾಯಿಸುವ ಮೂಲಕ ನಾವು ತಿಳಿಯಬಹುದು.

ಮಹಾಭಾರತದ ಅನುಶಾಸನ ಪರ್ವದಲ್ಲಿ ಸುದರ್ಶನ ಮತ್ತು ಅವನ ಪತ್ನಿ ಓಘವತಿ ಎಂಬ ಋಷಿ ದಂಪತಿಗಳ ಕಥೆ ಇದೆ. (ಅಧ್ಯಾಯ ಎರಡು). ಈ ಕಥೆಯನ್ನು ಭೀಷ್ಮನು ಧರ್ಮರಾಯನಿಗೆ ಹೇಳುತ್ತಾನೆ. ಸುದರ್ಶನನು ಅತಿಥಿ ಸತ್ಕಾರಕ್ಕಿಂತ ಮಿಗಿಲಾದ ವ್ರತ ಬೇರೊಂದು ಇಲ್ಲವೆಂದು ಭಾವಿಸಿದ್ದ. ಓಘವತಿ ಅವನ ಮನೋವ್ರತವನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದಳು. ಒಮ್ಮೆ ಸುದರ್ಶನ ತನ್ನ ಪತ್ನಿ ಓಘವತಿಗೆ ಹೇಳಿದ: 'ಗೃಹಸ್ಥಾಶ್ರಮಕ್ಕನುಸಾರವಾಗಿ ನಡೆಯಬೇಕೆಂದು ನನ್ನ ಸಂಕಲ್ಪ. ಆದ್ದರಿಂದ ನೀನು ಅತಿಥಿಗೆ ಅನುಕೂಲಳಾಗಿ ನಡೆದುಕೋ. ನಿನ್ನ ಶರೀರವನ್ನು ಅತಿಥಿಗೆ ನೀಡಬೇಕಾದ ಅಗತ್ಯ ಬಂದರೂ ಹಿಂದುಮುಂದು ನೋಡದೆ ಅವನ ಇಚ್ಛೆಯನ್ನು ನೆರವೇರಿಸು.' ಪತಿಯ ಆಜ್ಞೆಯನ್ನು ಸತಿಯು ಶಿರಸಾವಹಿಸಿದಳು. ಅನತಿ ಕಾಲದಲ್ಲಿಯೇ ಪತಿಯು ಮನೆಯಲ್ಲಿಲ್ಲದ ವೇಳೆಯಲ್ಲಿ ಒಬ್ಬ ಅತಿಥಿ ಆಶ್ರಮಕ್ಕೆ ಆಗಮಿಸಿದ. ಕೈಕಾಲು ತೊಳೆಯಲು ನೀರನ್ನು ಸ್ವೀಕರಿಸಿ ಆತಿಥ್ಯವನ್ನು ಪಡೆದ ನಂತರ ಅವನು ಅವಳೊಡನೆ ಆತ್ಮೀಯ ಸಮಾಗಮವನ್ನು ಬಯಸಿದ. ಅತಿಥಿಯನ್ನು ಅಸಮಾಧನಾಗೊಳಿಸಬಾರದೆಂಬ ಪತಿಯ ಆದೇಶದ ಪ್ರಕಾರ ಓಘವತಿ ಅವನ ಕೋರಿಕೆಯನ್ನು ಈಡೇರಿಸಿದಳು. ಆಶ್ರಮಕ್ಕೆ ಹಿಂತಿರುಗಿದ ಸುದರ್ಶನ ಋಷಿಗೆ ಸತಿಯ ಅತಿಥಿ ಸತ್ಕಾರದ ವಿಷಯ ಸಾದ್ಯಂತವಾಗಿ ತಿಳಿಯಿತು. ಪತಿವ್ರತಾ ಧರ್ಮವನ್ನು ಪಾಲಿಸಿದ ಸತಿಯನ್ನು ಅವನು ಬಹುವಾಗಿ ಮೆಚ್ಚಿಕೊಂಡ. 'ಈ ಸತ್ಕರ್ಮದಿಂದ ಸುದರ್ಶನನ ಕೀತಿ ಮೂರು ಲೋಕಗಳಲ್ಲಿ ಹರಡಿತು ಮತ್ತು ಸತಿಪತಿಯರಿಗೆ ಇಂದ್ರಲೋಕ ಪ್ರಾಪ್ತಿಯಾಯಿತು' ಎಂದು ಭೀಷ್ಮನು ಈ ಕಥೆಯನ್ನು ಮುಕ್ತಾಯ ಮಾಡುತ್ತಾನೆ. ಈ ಮೇಲಿನ ಕತೆ ಪತಿವ್ರತಾ ಧರ್ಮದ ಒಂದು ಪ್ರಾಚೀನ ಮಾದರಿಯಾಗಿದೆ.

ಅತಿಥಿ ಸತ್ಕಾರ ಮತ್ತು ಪತಿವ್ರತಾಧರ್ಮದ ಇನ್ನೊಂದು ಮಾದರಿಯನ್ನು ಮಹಾಭಾರತದ ಶಾಂತಿಪರ್ವದಲ್ಲಿ (ಅಧ್ಯಾಯ 266) ಕಾಣಬಹುದು. ಅದು ಗೌತಮ ಋಷಿ ಮತ್ತು ಅವನ ಮಗ ಚಿರಕಾರಿಗೆ ಸಂಬಂಧಿಸಿದ ಕಥೆಯಾಗಿದೆ. ಇದನ್ನೂ ಸಹ ಭೀಷ್ಮನು ಧರ್ಮರಾಯನಿಗೆ ಹೇಳುತ್ತಾನೆ. ಗೌತಮನು ಇಲ್ಲದ ವೇಳೆಯಲ್ಲಿ ಇಂದ್ರನು ಬ್ರಾಹ್ಮಣ ವೇಷದಲ್ಲಿ ಆಶ್ರಮಕ್ಕೆ ಬಂದು ಗೌತಮನ ಸತಿ ಅಹಲ್ಯೆಯೊಡನೆ ಸಮಾಗಮ ಮಾಡಿ ಹೊರಟು ಹೋಗುತ್ತಾನೆ. ಅನಂತರ ಆಶ್ರಮಕ್ಕೆ ಹಿಂತಿರುಗಿದ ಗೌತಮನಿಗೆ ವಿಷಯ ತಿಳಿಯುತ್ತದೆ. ಅವನು ಕೋಪಾವೇಶದಿಂದ ಅಹಲ್ಯೆಯನ್ನು ಸಂಹರಿಸಲು ಮಗ ಚಿರಕಾರಿಗೆ ಅಪ್ಪಣೆ ಮಾಡಿ ಪುನಃ ಕಾಡಿಗೆ ಹೊರಟುಹೋಗುತ್ತಾನೆ. ಚಿರಕಾರಿ ಯಾವುದನ್ನೂ ಅವಸರವಾಗಿ ಮಾಡುವ ಸ್ವಭಾವದವನಲ್ಲ. ಮಾಡಬೇಕಾದ ಕೆಲಸದ ಸಾಧಕ ಬಾಧಕಗಳನ್ನು ಚೆನ್ನಾಗಿ ತುಲನೆ ಮಾಡಿ ಕಾರ್ಯೋನ್ಮುಖನಾಗುವ ಸ್ವಭಾವದವನು. ಆದ್ದರಿಂದಲೇ ಅವನಿಗೆ ಚಿರಕಾರಿ - ನಿಧಾನ ಸ್ವಭಾವದವನು - ಎಂಬ ಹೆಸರು ಅನ್ವರ್ಥವಾಗಿ ರೂಢಿಗೆ ಬಂದಿರಬೇಕು. ಅವನು ತಂದೆಯ ಆಣತಿಯನ್ನು ಕುರಿತು ಚಿಂತಿಸತೊಡಗಿದ. ಪಿತೃವಾಕ್ಯ

ಪರಿಪಾಲನೆ ಮಗನಿಗೆ ಪರಮ ಪವಿತ್ರ ಕರ್ತವ್ಯವೆಂಬುದೇನೋ ನಿಜ. ಆದರೆ ಮಾತೃಹತ್ಯೆ ಸಂದರ್ಭದಲ್ಲಿ ಅದು ಆಚರಣೆಗೆ ತಕ್ಕುದೇ ಎಂಬ ಪ್ರಶ್ನೆ ಅವನಿಗೆ ಎದುರಾಯಿತು. ತಂದೆ ಮತ್ತು ತಾಯಿಯರಲ್ಲಿ ಸಮಾನ ಗೌರವವುಳ್ಳ ಚಿರಕಾರಿ ಆ ಪ್ರಶ್ನೆಗೆ ಪರಿಹಾರ ಹುಡುಕುತ್ತಾ ಕಾಲ ತಳ್ಳುತ್ತಾನೆ.

ಅತ್ತ ಅರಣ್ಯಕ್ಕೆ ಹೋದ ಗೌತಮ ಮುನಿಯ ಕೋಪ ಶಾಂತಗೊಂಡು ತಾನು ಮಗನಿಗೆ ನೀಡಿದ ಆಣತಿಯ ಬಗ್ಗೆ ಮರುಚಿಂತನೆ ಮಾಡುತ್ತಾನೆ. ತನ್ನಿಂದ ಎಂತಹ ಅಪರಾಧವಾಯಿತು ಎಂದು ಪರಿತಪಿಸುತ್ತಾ ಆಶ್ರಮಕ್ಕೆ ಹಿಂತಿರುಗುತ್ತಾನೆ. ಚಿರಕಾರಿ ತನ್ನ ಅಪ್ಪಣೆಯನ್ನು ಇನ್ನೂ ಪಾಲಿಸದಿರುವುದು ಅವನಿಗೆ ಸಮಾಧಾನ ನೀಡುತ್ತದೆ. ಮಗನ ನಿಧಾನ ಪ್ರವೃತ್ತಿಯನ್ನು ಗೌತಮ ಮೆಚ್ಚಿಕೊಳ್ಳುತ್ತಾನೆ. 'ಅತಿಥಿ ಸಮಾಗಮದ ಇಂತಹ ಸಣ್ಣ ಅಪರಾಧಕ್ಕಾಗಿ ಸ್ತ್ರೀವಧೆ ಅಧರ್ಮವಾಗುವುದು' ಎಂದು ತನ್ನಲ್ಲೇ ಹೇಳಿಕೊಳ್ಳುತ್ತಾನೆ. ಈ ಕಥೆಗೆ ಹಲವು ರೂಪಾಂತರಗಳಿವೆ. ಅವು ಅಲ್ಲಿ ಅಪ್ರಸ್ತುತ.

ಹಿಂದೆ ಹೇಳಿದ ಸುದರ್ಶನ ಕಥೆಗೂ ಗೌತಮನ ಈ ಕಥೆಗೂ ಇರುವ ಅಂತರವನ್ನು ನಾವು ಗಮನಿಸಬಹುದು. ಸುದರ್ಶನನು ಸ್ವಸ್ತ್ರೀ ಸಮರ್ಪಣೆಯನ್ನು ತನ್ನ ವ್ರತದ ಒಂದು ಭಾಗವನ್ನಾಗಿ ಪರಿಗಣಿಸಿದರೆ ಗೌತಮನು ಮೊದಲು ಕೋಪಾವೇಶದಿಂದ ಅದನ್ನು ದೋಷವೆಂದು ಪರಿಗಣಿಸಿ ಮರುಚಿಂತನೆಯ ನಂತರ ಅದನ್ನು ಧರ್ಮವೆಂದು ಅಂಗೀಕರಿಸುತ್ತಾನೆ.

ಸ್ತ್ರೀ ಪುರುಷರ ಸಂಬಂಧವನ್ನು ಕುರಿತ ಮತ್ತೊಂದು ಮಾದರಿಯನ್ನು ಮಹಾಭಾರತದ ವನಪರ್ವದಲ್ಲಿ ಬರುವ ಜಮದಗ್ನಿ, ಅವನ ಹೆಂಡತಿ ರೇಣುಕಾ ಮತ್ತು ಅವರ ಮಗ ಪರುಶುರಾಮ ಇವರ ಕಥೆಯಲ್ಲಿ ಕಾಣಬಹುದು. (ಅಧ್ಯಾಯ 116-117) ಜಮದಗ್ನಿಯ ಮಡದಿ ರೇಣುಕಾ ಒಮ್ಮೆ ನೀರು ತರಲು ಗಂಗಾನದಿಗೆ ಹೋಗಿದ್ದಾಗ ಅಲ್ಲಿ ಚಿತ್ರರಥನೆಂಬ ಗಂಧರ್ವನು ತನ್ನ ಸತಿಯರೊಡನೆ ಜಲಕ್ರೀಡೆ ಯಾಡುತ್ತಿರುವುದನ್ನು ನೋಡುತ್ತಾ ನಿಲ್ಲುತ್ತಾಳೆ. ಇದರಿಂದ ಪತಿಯ ಹೋಮಕಾಲ ಮಿಂಚಿ ಹೋಗುತ್ತದೆ. ಪರಪುರುಷನಲ್ಲಿ ಆಸಕ್ತಳಾದ ರೇಣುಕೆಯ ಪಾತಿವ್ರತ್ಯ ಭಂಗವಾಯಿತೆಂದು ಕ್ರುದ್ಧನಾದ ಜಮದಗ್ನಿ ಅವಳ ಶಿರಚ್ಛೇದ ಮಾಡಲು ತನ್ನ ಮಕ್ಕಳಿಗೆ ಅಪ್ಪಣೆ ಮಾಡುತ್ತಾನೆ. ಹಿರಿಯ ನಾಲ್ಕು ಮಕ್ಕಳೂ ತಮ್ಮ ತಾಯಿಯನ್ನು ಕೊಲ್ಲಲು ನಿರಾಕರಿಸುತ್ತಾರೆ. ಜಮದಗ್ನಿ ಅವಿಧೇಯರಾದ ನಾಲ್ಕು ಮಕ್ಕಳನ್ನು ಮತ್ತು ರೇಣುಕೆಯನ್ನು ಕೊಲ್ಲಲು ಐದನೆಯ ಮಗನಾದ ಪರಶುರಾಮನಿಗೆ ಅಪ್ಪಣೆ ಮಾಡುತ್ತಾನೆ. ಪರಶುರಾಮನು ಮರು ಮಾತಿಲ್ಲದೆ ತಂದೆಯ ಆಣತಿಯಂತೆ ತಾಯಿಯನ್ನೂ ಅಣ್ಣಂದಿರನ್ನೂ ಕೊಲ್ಲುತ್ತಾನೆ. ಇದರಿಂದ ಸಂತುಷ್ಟನಾದ ತಂದೆಯಿಂದ ವರವನ್ನು ಪಡೆದು ತಾಯಿ ಮತ್ತು ಅಣ್ಣಂದಿರನ್ನು ಬದುಕಿಸಿಕೊಳ್ಳುತ್ತಾನೆ.

ಜಮದಗ್ನಿಗೆ ತನ್ನ ಸತಿಯ ಒಂದು ಕ್ಷಣದ ಚಿತ್ತಚಾಂಚಲ್ಯವೂ ಸಹನೀಯವಾಗಲಿಲ್ಲವೆಂದ ಮೇಲೆ ಅವನಿಂದ ಅತಿಥಿಗೆ ಸ್ವಸ್ತ್ರೀ ಸಮರ್ಪಣೆಯ ಮಾತು ದೂರವೇ ಉಳಿಯಿತು. ಈ ಕಥೆಯಲ್ಲಿ ಪುರುಷನೊಡನೆ ಸ್ತ್ರೀಯ ಮಾನಸಿಕ ಸಮಾಗಮವು ತಾಯಿ ಮತ್ತು ಮೊದಲ ನಾಲ್ವರು ಮಕ್ಕಳಿಗೆ ಅಪರಾಧವಾಗುತ್ತದೆ. ತಕ್ಕ ಶಿಕ್ಷೆಯನ್ನು ವಿಧಿಸಿದ ನಂತರ ಅವಳ ಮೇಲೆ ಅವರಿಗೂ ಕನಿಕರವುಂಟಾಗುತ್ತದೆ.

ಪತಿವ್ರತಾ ಧರ್ಮದ ಮುಂದಿನ ಹಂತವನ್ನು ನಾವು ರಾಮಾಯಣದಲ್ಲಿ ಕಾಣುತ್ತೇವೆ. ರಾಮ ಲಕ್ಷ್ಮಣರಿಲ್ಲದ ವೇಳೆಯಲ್ಲಿ ರಾವಣನು ಸನ್ಯಾಸಿ ವೇಷದಲ್ಲಿ ಬಂದು ಸೀತೆಯ ಇಚ್ಛೆಗೆ ವಿರುದ್ಧವಾಗಿ ಅವಳನ್ನು ಅಪಹರಿಸಿಕೊಂಡು ಹೋಗುತ್ತಾನೆ. ಅತಿಥಿಗೆ ದೇಹಾರ್ಪಣೆ ಮಾಡುವ ಪದ್ಧತಿ ಸೀತೆಗೆ ಸ್ವಲ್ಪವೂ ಮಾನ್ಯವಾಗಿರಲಿಲ್ಲವೆಂಬುದು ಅವಳ ವಿರೋಧದಿಂದಲೇ ಸ್ಪಷ್ಟವಾಗುತ್ತದೆ. ಪರಪುರುಷನ ಅಧೀನದಲ್ಲಿದ್ದ ಸೀತೆಯನ್ನು ಸ್ವೀಕರಿಸಲು ಸಹ ರಾಮನ ಹಿಂಜರಿಯುತ್ತಾನೆ.

ರಾವಣನ ಹತ್ಯೆಯ ನಂತರ ಸೀತೆಯನ್ನು ರಾಮನಿರುವೆಡೆಗೆ ಕರೆತಂದಾಗ ಅವನು ಅವಳನ್ನು ಸಾಂತ್ವನಗೊಳಿಸಿ ಸ್ವೀಕರಿಸುವ ಬದಲು ಹೀಗೆ ಹೇಳುತ್ತಾನೆ: ''ನಾನು ಯುದ್ಧಮಾಡಿದ್ದು ಮತ್ತು ಗೆದ್ದಿದ್ದು ನಿನ್ನ ಸಲುವಾಗಿ ಅಲ್ಲ; 'ಭಾರ್ಯಾಪಹಾರಿಯನ್ನು ಶಿಕ್ಷಿಸಲಾರದವನು' ಎಂದು ನನ್ನ ಮೇಲೆ ಬರಬಹುದಾಗಿದ್ದ ಅಪವಾದವನ್ನು ಕಳೆದುಕೊಳ್ಳುವ ಸಲುವಾಗಿ. ನಿನಗೆ ಇಷ್ಟವಿದ್ದೆಡೆಗೆ ಹೋಗು. ಲಕ್ಷ್ಮಣ, ಭರತ, ಶತ್ರುಘ್ನ, ವಿಭೀಷಣ, ಸುಗ್ರೀವ ಇವರಲ್ಲಿ ನಿನಗೆ ಇಷ್ಟವಾದವರಲ್ಲಿಗೆ ಹೋಗಬಹುದು. ನೇತ್ರರೋಗಿಗೆ ದೀಪ ಸಹ್ಯವಾಗುವುದಿಲ್ಲ; ಅದರಂತೆಯೇ ನೀನು ನನಗೆ ಅಸಹ್ಯವಾಗಿ ಕಾಣುತ್ತಿರುವೆ.'' (ಯುದ್ಧಕಾಂಡ 115ನೇ ಸರ್ಗ)

ರಾಮನ ಕ್ರೂರ ಮಾತನ್ನು ಕೇಳಿ ಸೀತೆ ದಿಕ್ಕು ತೋಚದವಳಾಗಿ ಅಗ್ನಿದೇವನಿಗೆ ತನ್ನನ್ನು ಸಮರ್ಪಣೆ ಮಾಡಿಕೊಳ್ಳುತ್ತಾಳೆ. ಅಗ್ನಿದಿವ್ಯದಲ್ಲಿ ಅವಳು ಉತ್ತೀರ್ಣಳಾದ ಬಳಿಕವೇ ರಾಮನು ಸೀತೆಯನ್ನು ಸ್ವೀಕರಿಸುವುದು.

ಮೇಲೆ ಹೇಳಿದ ನಾಲ್ಕು ಕಥಾಮಾದರಿಗಳಿಂದ ಒಂದು ಸಮಸ್ಯೆ ಉದ್ಭವಿಸುತ್ತದೆ. ಇವುಗಳಲ್ಲಿ ಯಾವುದು ಮೊದಲು ನಡೆದುದು ಮತ್ತು ಯಾವುದು ಅನಂತರದ್ದು ? ಇವುಗಳ ಕಾಲಾನುಕ್ರಮಣಿಕೆಯನ್ನು ನಿರ್ಧರಿಸುವುದು ಹೇಗೆ ? ಪರಂಪರಾಗತ ನಂಬಿಕೆಯಂತೆ ರಾಮಾಯಣ ತ್ರೇತಾಯುಗದ

ಕಥೆ ಮತ್ತು ಮಹಾಭಾರತ ದ್ವಾಪರಯುಗದ್ದು ಆಗಿರುವುದರಿಂದ ರಾಮಾಯಣವೇ ಮೊದಲು ಅನಂತರ ಭಾರತ ಎಂಬುದು ಸಾಮಾನ್ಯ ನಂಬಿಕೆ. ಅಲ್ಲದೆ ವಿಷ್ಣುವಿನ ದಶಾವತಾರಗಳಲ್ಲಿ ರಾಮಾವತಾರ ಏಳನೆಯದಾದರೆ, ಕೃಷ್ಣಾವತಾರ ಎಂಟನೆಯದಾಗಿದೆ.

ಆದರೆ ರಾಮಾಯಣ ಮತ್ತು ಮಹಾಭಾರತಗಳಲ್ಲಿ ಬರುವ ಸಾಮಾಜಿಕ ಜೀವನ ಚಿತ್ರಣವನ್ನು ನೋಡಿದರೆ ಮೇಲಿನ ಅನುಕ್ರಮಣಿಕೆ ಅಷ್ಟು ಸರಿ ಎನಿಸುವುದಿಲ್ಲ. ಮಹಾಭಾರತದಲ್ಲಿ ಬರುವ ಕಥೆಗಳಲ್ಲಿ ಚಿತ್ರಿತವಾದ ಸಾಮಾಜಿಕ ಜೀವನ ಅತ್ಯಂತ ಪ್ರಾಚೀನವಾಗಿದ್ದು ಅದರೊಡನೆ ಹೋಲಿಸಿದಾಗ ರಾಮಾಯಣದಲ್ಲಿ ಕಂಡುಬರುವ ಸಾಮಾಜಿಕ ಜೀವನ ಅನಂತರದ್ದಾಗಿದೆ ಎಂಬುದು ಸ್ವಯಂವೇದ್ಯವಾಗಿದೆ. ಭಾರತೀಯ ಸಾಮಾಜಿಕ-ಮಾನವಶಾಸ್ತ್ರ ವಿದ್ವಾಂಸರೂ ಅದೇ ಅಭಿಪ್ರಾಯವನ್ನು ಹೊಂದಿದ್ದಾರೆ. ರೂಢಿಮೂಲವಾದ ಪೌರಾಣಿಕ ನಂಬಿಕೆಗಳಿಗಿಂತಲೂ ಮಹಾಕಾವ್ಯಗಳ ಆಂತರಿಕ ಆಧಾರಗಳು ಹೆಚ್ಚು ವಿಶ್ವಾಸಾರ್ಹವಾದವುಗಳಾಗಿರುತ್ತವೆ. ಆದ್ದರಿಂದ ಮೇಲೆ ಉಲ್ಲೇಖಿಸಿದ ಮಹಾಭಾರತದ ಸಾಮಾಜಿಕ ಜೀವನಕ್ಕಿಂತಲೂ ರಾಮಾಯಣದ ಸಾಮಾಜಿಕ ಜೀವನ ಚಿತ್ರಣ ಇತ್ತೀಚಿನದು ಎಂಬುದು ಮನದಟ್ಟಾಗುತ್ತದೆ. ಇತಿಹಾಸ ಸಂಶೋಧಕರಾದ ವಿ.ಕೆ. ರಾಜವಾಡೆ ಮತ್ತು ಮಹಾಭಾರತದ ವಿದ್ವಾಂಸರಾದ ವಿ.ಎಸ್. ಸುಖ್ತಂಕರ್ ಅವರೂ ಇದೇ ಅಭಿಪ್ರಾಯವುಳ್ಳವರಾಗಿದ್ದಾರೆ.

ಮೇಲೆ ಉಲ್ಲೇಖಿಸಲಾದ ಕೆಲವು ದೃಷ್ಟಾಂತಗಳಲ್ಲದೆ ಶಾಂತಿಪರ್ವದಲ್ಲಿ ಭೀಷ್ಮರು ಸ್ತ್ರೀಪುರುಷ ಸಂಬಂಧಗಳು ಕೃತ, ತ್ರೇತಾ, ದ್ವಾಪರ ಹಾಗೂ ಕಲಿಯುಗಗಳಲ್ಲಿ ಹೇಗೆ ವಿಕಾಸವಾಗುತ್ತಾ ಬಂದವು ಎಂಬುದನ್ನು ಸಂಕ್ಷಿಪ್ತವಾಗಿ ದಾಖಲಿಸಿದ್ದಾರೆ (ಅಧ್ಯಾಯ 207).

''ಕೃತಯುಗದಲ್ಲಿ ಸ್ತ್ರೀಪುರುಷರ ಸಮಾಗಮ ಮನಸೋ ಇಚ್ಛೆ ನಡೆಯುತ್ತಿತ್ತು. ತಾಯಿ ಮಗ, ತಂದೆ ಮಗಳು, ಅಣ್ಣ ತಂಗಿ ಸಂಬಂಧಗಳಿಗೆ ನಿಷೇಧವಿರಲಿಲ್ಲ. ತ್ರೇತಾಯುಗದಲ್ಲಿ ಅನ್ಯೋನ್ಯ ಸ್ಪರ್ಶದಿಂದ ಸಮಾಗಮ ಏರ್ಪಡುತ್ತಿತ್ತು. (ಮುಂದೆ ರೂಢಿಗೆ ಬಂದ ಪ್ರಾಣಿಗ್ರಹಣ ಪದ್ಧತಿಗೆ ಇದು ನಾಂದಿಯಾಗಿರಬೇಕು). ದ್ವಾಪರಯುಗದಲ್ಲಿ ಮಿಥುನಾವಸ್ಥೆ ರೂಢಿಗೆ ಬಂತು. ಕೃತ ಮತ್ತು ತ್ರೇತಾಯುಗಗಳಲ್ಲಿ ಎಲ್ಲ ಮಕ್ಕಳು ಇಡೀ ಸಮಾಜಕ್ಕೆ ಸೇರಿದವರಾಗಿರುತ್ತಿದ್ದರು. ದ್ವಾಪರಯುಗದ ನಂತರ ಮಕ್ಕಳ ತಂದೆತಾಯಿಯರು ಇಂಥವರೇ ಎಂದು ಖಚಿತವಾಯಿತು. ಕಲಿಯುಗದಲ್ಲಿ ಸ್ತ್ರೀಪರುಷರ ಜೋಡಿ ಸ್ಥಿರಗೊಂಡಿತು.'' ಭೀಷ್ಮರು ವರ್ಣಿಸಿರುವ ಭಿನ್ನ ಭಿನ್ನ ಯುಗಗಳಲ್ಲಿನ ಸ್ಥಿತಿ ಐತಿಹಾಸಿಕವಾಗಿದೆ.

ಒಟ್ಟಿನಲ್ಲಿ ಮಹಾಭಾರತದ ಕೃತಿಕಾರನಾದ ವ್ಯಾಸನು ತನ್ನ ಕಾಲದ ನೀತಿಯ ದೃಷ್ಟಿಯಿಂದ ನಿಂದನೀಯವೆನಿಸುವ ನಾನಾ ಪ್ರಾಚೀನ ಪದ್ಧತಿಗಳನ್ನು ಯಾವ ಸಂಕೋಚವೂ ಇಲ್ಲದೆ ಪುರಾತನ ಇತಿಹಾಸ ಎಂಬ ದೃಷ್ಟಿಯಿಂದ ಸ್ಪಷ್ಟವಾಗಿ ದಾಖಲಿಸಿಡಲು ಹಿಂಜರಿದಿಲ್ಲ. ಸ್ವಚ್ಛಂದ ಸಮಾಗಮ, ಅತಿಥಿಗೆ ಸ್ವಸ್ತ್ರೀ ಸಮರ್ಪಣೆ, ಪಶು ಸಮಾಗಮ, ಗುರುಪತ್ನೀ ಗಮನ, ಬಹುಪತ್ನಿತ್ವ, ಬಹುಪತಿತ್ವ, ಅಲ್ಪಕಾಲೀನ ವಿವಾಹ ಮುಂತಾದ ಸಂಬಂಧಗಳನ್ನು ಚಿತ್ರಿಸಿರುವುದನ್ನು ನೋಡಿದರೆ ಅವನು ಪ್ರಾಮಾಣಿಕ ಇತಿಹಾಸಕಾರನೆಂದು ಸ್ಪಷ್ಟವಾಗುತ್ತದೆ.

ಈ ಮೇಲಿನ ಚರ್ಚೆಯಿಂದ ಪತಿವ್ರತಾ ಧರ್ಮವೆಂಬುದು ಪುರುಷ ಪ್ರಧಾನ ಸಮಾಜ ಸ್ತ್ರೀಯನ್ನು ದಾಸಿಯನ್ನಾಗಿ ಬಳಸಿಕೊಳ್ಳಲು ಧರ್ಮದ ಹೆಸರಿನಲ್ಲಿ ಅನುಸರಿಸಿದ ಒಂದು ನಯವಂಚನೆಯಾಗಿ ಕಂಡುಬರುತ್ತದೆ.

- 'ಧರ್ಮ ಮತ್ತು ವೈಚಾರಿಕತೆ' ಪುಸ್ತಕದಿಂದ

## ಬುರ್ಖಾ ಹಾಕಿ, ಇಲ್ಲ ಗುಂಡಿಗೆ ಬಲಿಯಾಗಿ

ತಾಲಿಬಾನರು ಕೇವಲ ಅಫ್ಘಾನಿಸ್ತಾನವನ್ನು ಆಳುತ್ತಿದ್ದಾರೆ ಎಂದು ಭಾವಿಸಬೇಡಿ. ಹೆಣ್ಣನ್ನು ಹದ್ದುಬಸ್ತಿನಲ್ಲಿಡುವುದೇ ತಮ್ಮ ಪರಮ ಕರ್ತವ್ಯ ಎಂದು ಭಾವಿಸುವ ಸಂಪ್ರದಾಯವಾದಿ ಗಂಡಸರು ಇದೀಗ ಭಾರತದ ನೆಲದಲ್ಲೂ ತಮ್ಮ ಭಯೋತ್ಪಾದನೆಯನ್ನು ಹರಡುತ್ತಿದ್ದಾರೆ. 'ಕಾಶ್ಮೀರದ ಕಣಿವೆಯಲ್ಲಿ ಮುಸ್ಲಿಮ್ ಹೆಂಗಸರು ಬುರ್ಖಾ ಹಾಕದಿದ್ದರೆ ಗುಂಡಿಗೆ ಬಲಿಯಾಗುತ್ತಾರೆ' ಎಂದು ಹೆದರಿಸುತ್ತಾ ಬಂದಿದ್ದ ಪಾಕಿಸ್ತಾನಿ ಹಿನ್ನೆಲೆಯ ಭಯೋತ್ಪಾದಕರು, ತಮ್ಮ ಬೆದರಿಕೆಯನ್ನು ಈಗ ದಿಟವಾಗಿಸಿದ್ದಾರೆ. ಕಳೆದ ತಿಂಗಳು, ಬುರ್ಖಾ ಹಾಕಿಲ್ಲದ ಮೂವರು ಹೆಣ್ಣು ಮಕ್ಕಳ ಕಾಲಿಗೆ ಗುಂಡಿಟ್ಟು ಗಾಯಗೊಳಿಸಿದ್ದಾರೆ. 'ಬುರ್ಖಾ ಹಾಕಿ, ಇಲ್ಲ ಗುಂಡಿಗೆ ಬಲಿಯಾಗಿ' ಅವರ ಮಂತ್ರವಾಗಿದೆ. ಆರಂಭದಲ್ಲಿಯೇ ಇಂತಹ ಪ್ರಯತ್ನಗಳನ್ನು ತಡೆಯದಿದ್ದರೆ, ಕಾಶ್ಮೀರದ ಹೆಂಗಸರು, ಸ್ವತಂತ್ರ ಭಾರತದಲ್ಲಿದ್ದೂ ಅಸ್ವತಂತ್ರರಾಗುವುದು ಖಂಡಿತಾ.

# ಮದ್ಯ ಮತ್ತು ಮಹಿಳೆ.

ಪುರುಷರ ಮದ್ಯವ್ಯಸನದಿಂದ ತೊಂದರೆಗೊಳಗಾಗುವವಳು ಮಹಿಳೆ ಅಷ್ಟೇ ಅಲ್ಲ, ಎಷ್ಟೋ ಕುಟುಂಬಗಳು ಗಂಡಸಿನ ಕುಡಿತದಿಂದ ಬೀದಿ ಪಾಲಾಗಿವೆ. ಇಲ್ಲವೇ, ನಿರ್ನಾಮವಾಗಿವೆ. ಅದನ್ನು ಪ್ರತಿಭಟಿಸಿ ಆಧುನಿಕ ಸಂಘಟಿತ ಮಹಿಳೆ ಜಾಗೃತಳಾಗಿ ಬೀದಿಗಿಳಿದು ಪಾನ ನಿರೋಧ ಚಳುವಳಿಗೆ ಕೈ ಹಾಕಿದ್ದೂ ಉಂಟು. ಇದು ಕೆಲವೆಡೆ ಯಶಸ್ವಿಯಾದದ್ದೂ ಉಂಟು. ಈ ಹಿನ್ನೆಲೆಯಲ್ಲಿ ಇತ್ತೀಚೆಗೆ ಪತ್ರಿಕೆಗಳಲ್ಲಿ ವರದಿಯಾದ ಸುದ್ದಿಯಂತೂ ಎಲ್ಲ ಮಾನವಂತರಿಗೂ ಗಾಬರಿ ಹುಟ್ಟಿಸುತ್ತದೆ.

ನವೆಂಬರ್ 10ರಂದು ವಿಧಾನಸಭೆಯಲ್ಲಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಮಿತಿಯು ಮಂಡಿಸಿದ ವರದಿಯಂತೆ ರಾಜ್ಯದಲ್ಲಿ ಹಾಲಿ ಇರುವ ಅಬಕಾರಿ ನಿಯಮವನ್ನು ಸಡಿಲಿಸಿ ಎಲ್ಲಿ ಮದ್ಯ ಮಾರಾಟ ವ್ಯವಸ್ಥೆ ಇರುತ್ತದೋ ಅಂತಹ ಕಡೆ ಹದಿನೆಂಟು ವರ್ಷಕ್ಕಿಂತ ಮೇಲ್ಪಟ್ಟ ಮಹಿಳೆಯರಿಗೆ ಮದ್ಯ ಮಾರಾಟಕ್ಕೆ ಅವಕಾಶ ಕಲ್ಪಿಸುವಂತೆ ಸರ್ಕಾರಕ್ಕೆ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಮಿತಿಯು ಶಿಫಾರಸ್ಸು ಮಾಡಿದೆ. ಈ ಶಿಫಾರಸ್ಸಿನ ಹಿಂದಿರುವ ಘನ ಉದ್ದೇಶವಾದರೂ ಏನು? ಮಹಿಳೆಯರಿಗೆ ಉದ್ಯೋಗ ಕಲ್ಪಿಸುವ ಬೃಹತ್ ಯೋಜನೆಯೇ ಇದು? ಇಲ್ಲ, ಮಾರುಕಟ್ಟೆ ಸಂಸ್ಕೃತಿಯ ಇಂದಿನ ಸರಕುಗಳಲ್ಲಿ ಮಹಿಳೆಯನ್ನೂ ಮಾರಾಟಕ್ಕೆ ಅನುವು ಮಾಡುವ 'ಪ್ರಗತಿ'ಯ ಸೂಚನೆಯೇ ?

ಈ ಹಿಂದೆ ಅಬಕಾರಿ ನಿಯಮವು 1965ರ ಕಲಂ 20ರ ಪ್ರಕಾರ ಎಲ್ಲಿ ಮದ್ಯ ಮಾರಾಟ ವ್ಯವಸ್ಥೆ ಇರುತ್ತದೋ ಅಲ್ಲಿ ಹೆಣ್ಣು ಮಕ್ಕಳನ್ನು ಹಾಗೂ ಮಕ್ಕಳನ್ನು ಕೆಲಸಕ್ಕೆ ನೇಮಕ ಮಾಡಿಕೊಳ್ಳಬಾರದೆಂಬ ನಿರ್ಬಂಧವಿತ್ತು. ಆದರೆ ವಾಸ್ತವವೆಂದರೆ, ಡಿಸ್ಟಿಲರಿಗಳು, ಬ್ರೂವರಿಗಳು ಮತ್ತು ಮದ್ಯಪಾನ ತಯಾರಿಕಾ ಘಟಕಗಳಲ್ಲಿ ಬಹುತೇಕ ಮಹಿಳೆಯರು ಮತ್ತು ಮಕ್ಕಳೇ ಅತ್ಯಂತ ಹೀನ ಸ್ಥಿತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಮಕ್ಕಳ ಮತ್ತು ಮಹಿಳೆಯರ ಶೋಷಣೆಯ ಅಧ್ಯಯನ ಮಾಡಿರುವ ಸಮಿತಿಗೆ 'ಮದ್ಯ ಮಾರಾಟ'ಕ್ಕೆ ಮಹಿಳೆಯರನ್ನು ಶಿಫಾರಸ್ಸು ಮಾಡುವ ಬುದ್ಧಿಯಾದರೂ ಏಕೆ ಬಂತೋ ? ಈ ಸಲಹೆಯೇ ಅತ್ಯಂತ ಆಕ್ರೋಶ ಹುಟ್ಟಿಸುವ ಹೀನಾಯ ಯೋಚನೆಯಾಗಿದೆ.

ಅದಕ್ಕೆ ಬರೆ ಇಟ್ಟಂತೆ ''ಕುಡಿಯುವುದು ನಮ್ಮ ಹಕ್ಕು ಅದನ್ನು ಯಾರೂ ತಡೆಗಟ್ಟಲು ಸಾಧ್ಯವಿಲ್ಲ. ಮಹಿಳೆಯರ ದೂರಿನ ಹಿನ್ನೆಲೆಯಲ್ಲಿ ಮುಚ್ಚಿರುವ ಮದ್ಯದಂಗಡಿಗಳನ್ನು ತೆರೆಯಬೇಕು'' - ಎಂದು ದೂರಿತ್ತವರು ಯಾರು ಗೊತ್ತೇ ? ಗದಗ ಜಿಲ್ಲೆಯ ಕೆಲವು ಗ್ರಾಮಗಳಲ್ಲಿ ಮಹಿಳೆಯರು ಹೋರಾಟ ಮಾಡಿ ತಮ್ಮ ಗ್ರಾಮಗಳಲ್ಲಿನ ಮದ್ಯದಂಗಡಿಗಳನ್ನು ಮುಚ್ಚಿದ್ದರು. ಇದರಿಂದ ಕುಪಿತರಾದ ಆ ಗ್ರಾಮಸ್ಥರು ಜಿಲ್ಲಾಧಿಕಾರಿಗಳಿಗೆ ಪತ್ರ ಬರೆದು ತಮ್ಮ ಕುಡಿಯುವ ಹಕ್ಕಿಗೆ ಕುಂದುಂಟಾಗದಿರಲು ಆಗ್ರಹಿಸಿದ್ದಾರೆ.

ಕುಡಿಯಲು ನೀರಿಗೇ ಕಷ್ಟವಾಗಿರುವ ಭಾರತದಂತಹ ಬಡದೇಶದಲ್ಲಿ ಮದ್ಯಪಾನವು ಕೆಲವರಿಗೆ ಹಕ್ಕಿನ ವಿಷಯವಾದರೆ ಯಾವುದಕ್ಕೆ ಹೋರಾಟ ನಡೆಸಬೇಕು ? ಎಂಬ ಗೊಂದಲ ಹುಟ್ಟಬಹುದು. ಮುಂದೊಂದು ದಿನ 'ಕುಡಿತ ನನ್ನ ಹಕ್ಕು' ಎಂದವರು ಕುಡಿದು ನನ್ನ ಹೆಂಡತಿ ಮಕ್ಕಳನ್ನು ಹೊಡೆಯುವುದು ನನ್ನ ಹಕ್ಕು' ಎಂದೆನ್ನುವುದಿಲ್ಲ, ಎಂದು ಹೇಳುವುದಿಲ್ಲವೆನ್ನುವುದಕ್ಕೆ ಏನು ಗ್ಯಾರಂಟಿ ? ●

# ಸತ್ಯದೊಡನೆ ಪ್ರಯೋಗಗಳು

ಪ್ರೊ. ಎಂ.ಎಸ್. ಪ್ರಸನ್ನ ನಿಜಕ್ಕೂ ದಿಟ್ಟ ತಾಯಿ ಮಾತ್ರವಲ್ಲ, ತಪ್ಪು ಹಾದಿಗಿಳಿದ ಮಗನನ್ನು ಸರಿ ಹಾದಿಗೆಳೆದ ಸಾಹಸಿ ತಾಯಿ. ಬ್ಯಾಂಕ್ ಒಂದನ್ನು ಲೂಟಿ ಮಾಡಿದ ಮಗ ಅರುಣಗೆ ಬುದ್ಧಿ ಹೇಳಿ, ಕಾನೂನಿಗೆ ತನ್ನನ್ನು ತಾನು ಒಪ್ಪಿಸಿಕೊಳ್ಳುವಂತೆ ಮಾಡಿದ ಮಹಾಮಾತೆ ಪ್ರೊ. ಪ್ರಸನ್ನ. ವಿಪರ್ಯಾಸವೆಂದರೆ ನೈತಿಕ ಅಂಧಃ ಪತನಕ್ಕಿಳಿದ ಸಮಾಜದಲ್ಲಿ ಆಕೆಯ ಆದರ್ಶವಾದ, ಆಕೆಗೇ ಅಪಾಯ ತಂದು, ತಿರುಗಿ ಬಿದ್ದಿದೆ. ಇಂತಹ ತಾಯಿಗೆ ಮೆಚ್ಚುಗೆ, ಪುರಸ್ಕಾರದ ಬದಲು, ಪೋಲೀಸರ ಕಿರಿಕಿರಿ, ಸಮಾಜದ ಕುಹಕ ಎದುರಾಗಿದೆ. 'ಕಳ್ಳನನ್ನು ನಾವೇ ಹಿಡಿದೆವು' ಎಂದು ಮೆರೆಯುತ್ತಿದ್ದ ಪೋಲೀಸರ ಬಡಾಯಿಯನ್ನು ತೆರೆದಿಟ್ಟ ತಪ್ಪಿಗೆ ಪ್ರಸನ್ನ ಎಲ್ಲಿಲ್ಲದ ತೊಂದರೆ ಅನುಭವಿಸುತ್ತಿದ್ದಾರೆ. 'ನಾವು ಹೇಳಿದಂತೆ ಕೇಳದಿದ್ದರೆ ಬ್ಯಾಂಕ್ ದರೋಡೆಯಲ್ಲಿ ನಿನ್ನ ಪಾಲೂ ಇದೆ ಎಂದು ಆಪಾದನೆ ಹೇರುತ್ತೇವೆ' ಎಂಬ ಬೆದರಿಕೆ ಎದುರಿಸಬೇಕಾದ ಈ ತಾಯಿಯ ಹೋರಾಟ ಈಗ ಆರಂಭವಾಗಿದೆ.

ಒಂದು ವರ್ಷದ ಹಿಂದೆ ಕೇರಳದ ಎಸ್.ಎನ್. ಕಾಲೇಜಿನ ಸಸ್ಯಶಾಸ್ತ್ರದ ಪ್ರೊಫೆಸರ್ ಆದ ಪ್ರಸನ್ನಾ ಏಳು ಗಂಟೆಯ ಸುಮಾರಿಗೆ ಮನೆಗೆ ಹಿಂತಿರುಗಿದಳು. ಆಕೆಗೆ ಅಂದು ಮಗನ ಮಂಚದ ಕೆಳಗೆ ರೂಪಾಯಿ ನೋಟು ಭರ್ತಿ ಇದ್ದ ಸೂಟಕೇಸ ಕಾಣಿಸಿತು. ದಿನವೆಲ್ಲ ವೀಡಿಯೋ ಆಟ ಆಡುತ್ತಾ ಗುಂಪು ಗೆಳೆಯರೊಂದಿಗೆ ಅಲೆಯುವ ಮಗ ಅರುಣ್, ಡಿಗ್ರಿಯನ್ನೂ ಮುಗಿಸದೆ ಕಾಲೇಜು ಬಿಟ್ಟವನು. ಹಣವನ್ನು ಪ್ರಸನ್ನ ಎಣಿಸಿ ನೋಡಿದಾಗ, ಅಲ್ಲಿ ಎರಡು ಲಕ್ಷ, ಮುವತ್ತು ಸಾವಿರು ರೂಪಾಯಿಗಳಿತ್ತು! ಮೂರು ದಿನಗಳ ಹಿಂದೆ ಬ್ಯಾಂಕ್ ಒಂದರಲ್ಲಿ ಲೂಟಿ ಮಾಡಿದ ಹಣದ ಮೊತ್ತ ಇದೇ ಆಗಿದ್ದು ಸುದ್ದಿ ಪತ್ರಿಕೆಯಲ್ಲಿ ಪ್ರಸನ್ನ ಓದಿದ್ದರು. ಅವರ ಎದೆ ಹೊಡೆದು ಕೊಂಡಿತು. ಆ ಕ್ಷಣ ಮಗನನ್ನು ಕೊಂದು ತಾವೂ ಆತ್ಮಹತ್ಯೆ ಮಾಡಿಕೊಳ್ಳಲು ಮನಸ್ಸು ಯೋಚಿಸಿತು. ನಿಧಾನವಾಗಿ ಮನಸ್ಸನ್ನು ಹತೋಟಿಗೆ ತಂದುಕೊಂಡರು. ತಾನು ಆ ಪರಿಸ್ಥಿತಿಯನ್ನು ಓರ್ವ ಪ್ರೀತಿಯ ತಾಯಿಯಾಗಿ, ಅದೇ ಸಮಯದಲ್ಲಿ ಜವಾಬ್ದಾರಿಯುತ ಪ್ರಜೆಯಾಗಿ ಎದುರಿಸಬೇಕು ಎಂದು ನಿರ್ಧರಿಸಿದಳು. 'ಅರುಣ ನನ್ನ ಮಗ, ನನ್ನ ಹೃದಯ ಅವನಲ್ಲಿದೆ. ಆದರೆ ಆ ಕಾರಣದಿಂದ ಆತನ ತಪ್ಪಿಗೆ ಶಿಕ್ಷೆ ತಪ್ಪಬೇಕೆಂದು ನಾನು ಬಯಸುವುದಿಲ್ಲ' ಎನ್ನುತ್ತಾರೆ ಈ ತಾಯಿ.

ಅರುಣ್ ಮನೆಗೆ ಬಂದಾಗ, ಪ್ರಸನ್ನ ಆತನನ್ನು ಪ್ರಶ್ನಿಸಿದರು. ಆಕೆಯ ಅನುಮಾನ ಸತ್ಯವಾಗಿತ್ತು. ಬ್ಯಾಂಕು ಲೂಟಿ ಮಾಡಿದ್ದನ್ನು ಮಗ ಒಪ್ಪಿಕೊಂಡ. ಪ್ರಸನ್ನ ಮಗನನ್ನು ಪೋಲೀಸರಿಗೆ ಶರಣಾಗುವಂತೆ ಒತ್ತಾಯಿಸಿದಳು. 'ನೀನು ಈ ಹಣದಿಂದ ಇಡೀ ಸಾಮ್ರಾಜ್ಯವನ್ನೇ ಕಟ್ಟಬಹುದು, ಆದರೆ ಯಾವ ತಾಯಿಯೂ ಕೆಟ್ಟ ಮಗನನ್ನು ಹೆಮ್ಮೆಯಿಂದ ನೋಡುವುದಿಲ್ಲ' ಎಂದು ತಿಳಿ ಹೇಳಿದಳು. ಮಗ ಇಂತಹ ಕೆಲಸ ಏಕೆ ಮಾಡಿದ ಎಂಬುದಕ್ಕೆ ಅವನಲ್ಲಿಯೂ ಉತ್ತರವಿರಲಿಲ್ಲ. ಪ್ರಸನ್ನ ಅವರಿಗೆ ಆಘಾತವಾದದ್ದೆಂದರೆ, ಅವರ ಜಂಟಿ ಅಕೌಂಟಿನಿಂತ ಆತ ಆಕೆಯ ಅರಿವೇ ಇಲ್ಲದೆ ಎರಡು ಲಕ್ಷ ತೆಗೆದುಕೊಳ್ಳಲು ಸಾಧ್ಯವಿತ್ತು, ಹೀಗಿರುವಾಗ ಎರಡು ಲಕ್ಷಕ್ಕೆ ಬ್ಯಾಂಕ್ ದರೋಡೆ ಮಾಡಿದ್ದೇಕೆ ಎಂಬುದು ಅವರಿಗೆ ಯಕ್ಷಪ್ರಶ್ನೆಯಾಗಿದೆ. ಬಹುಶಃ ಈ ಕಿಶೋರ ವಯಸ್ಸಿನ ಹುಡುಗ ತನ್ನ ಸಿನೆಮಾ ನಾಯಕರನ್ನು ಅನುಕರಿಸುತ್ತಿದ್ದ.

ಪೋಲೀಸರು ಅದಾಗಲೆ ಪ್ರತ್ಯಕ್ಷ ಸಾಕ್ಷಿಗಳ ವಿವರಣೆಯನ್ನು ಹೋಲುತ್ತಿದ್ದ ಬ್ಯಾಂಕಿನ ಕೆಲಸಗಾರನೊಬ್ಬನನ್ನು ಬಂಧಿಸಿಟ್ಟಿದ್ದರು. ಯಾವ ರೀತಿಯಲ್ಲೂ ಅರುಣನನ್ನು ಅನುಮಾನಿಸಲು ಸಾಧ್ಯವಿರಲಿಲ್ಲ. ಕ್ಯಾಷಿಯಾರ್ ದರೋಡೆಕೋರನನ್ನು 'ಮುವತ್ತು ವರ್ಷದ ಗೋಧಿ ಬಣ್ಣದ ಮನುಷ್ಯ' ಎಂದು ವರ್ಣಿಸಿದ್ದ. ಹತ್ತೊಂಬತ್ತು ವರ್ಷದ ಕಪ್ಪು ಬಣ್ಣದ ಅರುಣನನ್ನು ಯಾರೂ ಅನುಮಾನಿಸುವಂತಿರಲಿಲ್ಲ.

ಪ್ರಸನ್ನ ಓರ್ವ ನ್ಯಾಯವಾದಿಯ ಸಲಹೆ ಪಡೆದು ಪೋಲೀಸ್ ಡೆಪ್ಯುಟಿ ಸೂಪರಿಂಟೆಂಡೆಂಟ್ ರಾಧಾಕೃಷ್ಣ ನಾಯರ್ ಅವರನ್ನು ಭೇಟಿಯಾದರು. ಮರು ದಿನ ಕದ್ದ ಹಣವನ್ನೆಲ್ಲ ಅವರಿಗೆ ಕೊಂಡೊಯ್ದು ಒಪ್ಪಿಸಿದರು. ಅರುಣನೂ ತಾಯಿಯ ಆದೇಶದಂತೆ ಶರಣಾದ. ಕೊಚಿನ್‌ನ ಪೋಲೀಸ್ ಕಮಿಷನರ್ ಬಂದು ತಾಯಿಯ ದಿಟ್ಟತನವನ್ನು ಹಾಡಿ ಹೊಗಳಿದರು. ಆದರೆ ಈ ಎಲ್ಲ ಸಮಯದಲ್ಲಿ ಪೋಲೀಸರು ಸುಳ್ಳು ಕತೆಯನ್ನು ಹೆಣೆದು ತಾಯಿ ಮಗ ಇಬ್ಬರನ್ನೂ ಸಿಕ್ಕಿ ಹಾಕಿಸಿ ತಮ್ಮ ಪ್ರತಾಪವನ್ನು ಮೆರೆಯಲಿದ್ದಾರೆ ಎಂದು ಈ ತಾಯಿಗೆ ತಿಳಿದಿರಲಿಲ್ಲ. 'ಕಳ್ಳನನ್ನು ನಾವು ಹಿಡಿದೆವು' ಎಂದು ಮಾಧ್ಯಮಗಳೆದರು ಪೋಲೀಸರು ಸಾರಿ ಸಾರಿ ಹೇಳಿದಾಗ ಪ್ರಸನ್ನಾಗೆ ನಿಜಕ್ಕೂ ಕೋಪ ಬಂದಿತು. ಪ್ರಸನ್ನ ಪೋಲೀಸ್ ಸುದ್ದಿ ಸುಳ್ಳೆಂದು ಪತ್ರಿಕಾ ಹೇಳಿಕೆ ನೀಡಿದ್ದು ಪೋಲೀಸರನ್ನು ವಿಪರೀತ ಸಿಟ್ಟೇಗೇರಿಸಿತು. 'ತೆಪ್ಪಗಿರದಿದ್ದರೆ ನಿನ್ನನ್ನೂ ದರೋಡೆಯಲ್ಲಿ ಶಾಮಿಲು ಮಾಡಿ ಬಂಧಿಸುತ್ತೇವೆ' ಎಂದು ಬೆದರಿಸಿದರು. ಸತ್ಯದ ಹಾದಿಯಲ್ಲಿ ನಡೆಯುವ ಧೈರ್ಯ ತೋರಿದ ಮಹಳೆಯನ್ನು ಇಡೀ ವ್ಯವಸ್ಥೆ ತುಳಿಯಲು ಹೊರಟಿದೆ. ತಮ್ಮ ಸತ್ಯದ ಕತೆಯನ್ನು ಜನಕ್ಕೆ ತಲುಪಿಸಲು ಹೆಣಗುತ್ತಿರುವ ಪ್ರಸನ್ನ ಎದುರು ಹೋರಾಟದ ಸುದೀರ್ಘ ಹಾದಿ ಕಾದು ನಿಂತಿದೆ. ●

## ಹ್ಯಾರಿ ಪಾಟರ್‌ನ ಮಾಯಾಲೋಕ

ನೀವು ಎಲ್ಲೆಲ್ಲಿಯೂ ಕೇಳುತ್ತಿರುವ ಹೆಸರು - 'ಹ್ಯಾರಿ ಪಾಟರ್'. ಮಕ್ಕಳ ಪುಸ್ತಕ 'ಹ್ಯಾರಿ ಪಾಟರ್' ಪ್ರಚಂಡ ಯಶಸ್ಸನ್ನು ಪಡೆದಿದೆ. ಹ್ಯಾರಿ ಪಾಟರ್ ಕುರಿತ 640 ಪುಟಗಳ ನಾಲ್ಕನೇ ಪುಸ್ತಕವನ್ನು ಕೊಳ್ಳಲು ಮಧ್ಯರಾತ್ರಿ ಮಕ್ಕಳು ಕ್ಯೂ ನಿಂತು ಕಾದಿದ್ದರು! ಈ ಮಕ್ಕಳ ಪುಸ್ತಕ 'ಹ್ಯಾರಿ ಪಾಟರ್' ದುಷ್ಟ ಶಕ್ತಿಯ ವಿರುದ್ಧ ಹೋರಾಡುವ ಹನ್ನೊಂದು ವರ್ಷದ ಪುಟ್ಟ ಬಾಲಕ. ಮಾಯಾಮಂತ್ರಗಳ ಅದ್ಭುತ ಲೋಕದ ಸೃಷ್ಟಿ ಈ ಪುಸ್ತಕಗಳಲ್ಲಿ. ಕೊಲೆಯಾದ ತಂದೆ ತಾಯಿ, ಬೇರೆ ದಾರಿ ಕಾಣದೆ ಕ್ರೂರಿ ಅಂಕಲ್ ಮತ್ತು ಆಂಟ್ ಜೊತೆಯಲ್ಲಿ ಬದುಬೇಕಾದ ಅನಿವಾರ್ಯ, ಅಲ್ಲಿಂದ ಆರಂಭವಾಗುತ್ತದೆ ಪುಟ್ಟ ಬಾಲಕ ಹ್ಯಾರಿ ಪಾಟರನ ಅದ್ಭುತ ಸಾಹಸಗಳು, ಪುಟ್ಟ ಮಕ್ಕಳನ್ನು ಹಿಡಿದಿಡುವ ಕಲ್ಪನಾ ಜಗತ್ತು.

1997ರಲ್ಲಿ ಹೊರ ಬಂದ ಮೊಟ್ಟ ಮೊದಲ 'ಹ್ಯಾರಿ ಪಾಟರ್ ಅಂಡ್ ದಿ ಫಿಲಾಸಫರ್ಸ್ ಸ್ಟೋನ್' ಎಂಬ ಪುಸ್ತಕದ 70,000 ಪ್ರತಿಗಳು ಬ್ರಿಟನ್ ಒಂದರಲ್ಲಿಯೇ ಮಾರಾಟವಾದವು. ಮತ್ತೆ ಎಂಟು ದೇಶಗಳಲ್ಲಿ ಮಾರಾಟವಾದ ಈ ಪುಸ್ತಕದ ಅಮೆರಿಕನ್ ಹೊತ್ತಿಗೆಗೆ ಒಂದು ಲಕ್ಷ ಡಾಲರ್ ಹಣವನ್ನು ಮುಂಗಡವಾಗಿ ನೀಡಲಾಯಿತು. ಯಾವುದೇ ಲೇಖಕರ ಮೊದಲ ಪುಸ್ತಕಕ್ಕೆ, ಅದರಲ್ಲೂ ಮಕ್ಕಳ ಪುಸ್ತಕಕ್ಕೆ ಇಷ್ಟು ಹಣ ನೀಡಿದ್ದು ಕೇಳಿರಲಿಲ್ಲ. ಹ್ಯಾರಿ ಪಾಟರ್ ಮೂರನೇ ಪುಸ್ತಕ 1999 ರಲ್ಲಿ ಹೊರಬಂದಾಗ, 70 ಲಕ್ಷ ಪ್ರತಿಗಳು ಮಾರಾಟವಾದವು. ಭಾರತದಲ್ಲಿ 30,000 ಪ್ರತಿಗಳು ಮಾರಾಟವಾದವು. ಇದೀಗ ಹೊರ ಬಂದಿದೆ ನಾಲ್ಕನೆ ಹ್ಯಾರಿ ಪ್ಯಾಟರ್ ಪುಸ್ತಕ. ಪುಸ್ತಕ ಹೊರಬರುವ ಮೊದಲೆ 53 ಲಕ್ಷ ಪ್ರತಿಗಳು ಮುಂಗಡವಾಗಿ ಕಾದಿರಿಸಲ್ಪಟ್ಟಿದ್ದವು!

ಅಂದಹಾಗೆ, ಈ ಅದ್ಭುತ ಮಕ್ಕಳ ಪುಸ್ತಕಗಳ ಕತೆಗಾರ್ತಿ, ಜೆ.ಕೆ. ರೌಲಿಂಗ್ ಎಂಬ 34 ವರ್ಷಗಳ ಮಹಿಳೆ. ಆಕೆ ದೊಡ್ಡವರಿಗಾಗೆ ಬರೆದ ಎರಡು ಕಾದಂಬರಿಗಳೂ ಪ್ರಕಟವಾಗಲೇ ಇಲ್ಲ. ಶಾಲೆಯೊಂದರಲ್ಲಿ ಟೀಚರ್ ಕೆಲಸ ಮಾಡುತ್ತಿದ್ದ ಆಕೆ ಲೇಖಕಿಯಾಗುವ ಕನಸು ಕಂಡವಳು. 1990ರ ಇಸವಿ, ಒಂದು ದಿನ ಮ್ಯಾಚೆಸ್ಟರನಿಂದ ಲಂಡನ್‌ಗೆ ಬರುವ ರೈಲಿನಲ್ಲಿ ತಡವಾಗಿ ನಾಲ್ಕು ಗಂಟೆ ಸಿಕ್ಕಿಕೊಂಡಾಗ ರೌಲಿಂಗ್, ಪುಟ್ಟ ಹುಡುಗ ಹ್ಯಾರಿ ಪಾಟರನ ಪಾತ್ರವನ್ನು ಕಲ್ಪಿಸಿಕೊಂಡಳು. ಮುಂದಿನ ಐದು ವರ್ಷಗಳ ಕಾಲ ಹ್ಯಾರಿ ಪಾಟರ್ ಕುರಿತ ಮೊದಲ ಪುಸ್ತಕದ ಮೇಲೆ ಕೆಲಸ ಮಾಡಿದಳು. ಈ ನಡುವೆ ಪೋರ್ಚುಗಲ್‌ಗೆ ಪಾಠ ಹೇಳಿಕೊಡಲು ಹೋದ ರೌಲಿಂಗ್, ಅಲ್ಲಿ ಓರ್ವ ಪೋರ್ಜುಗೀಸ್ ಪತ್ರಿಕೋದ್ಯಮಿಯೊಡನೆ ವಿವಾಹವಾದಳು. ಮಗಳು ಜೆಸ್ಸಿಕಾ ಹುಟ್ಟುವ ಹೊತ್ತು ಮದುವೆ ಮರಿದು ಬಿತ್ತು. ಮೂರು ತಿಂಗಳ ಮಗುವನ್ನು ಹೊತ್ತು ಬ್ರಿಟನ್ ಹಿಂತಿರುಗಿದ ರೌಲಿಂಗ್ ಬಳಿ ಕೆಲಸವಿರಲಿಲ್ಲ. ಅಪ್ಪಟ ದಾರಿದ್ರ್ಯದ ದಿನಗಳು. ಹೇಗಾದರೂ ಬದುಕಬೇಕಿದ್ದ ಈ ದಿನಗಳಲ್ಲಿ ರೌಲಿಂಗ್ ತನ್ನ ಹ್ಯಾರಿ ಪಾಟರ್ ಪುಸ್ತಕವನ್ನು ಮುಗಿಸುವ ಛಲ ಹೊತ್ತಳು. ಕೊರೆವ ಚಳಿಯ ತನ್ನ ಫ್ಲಾಟಗೆ ಹೋಗಲಾರದೆ, ಪುಟ್ಟ ಮಗಳನ್ನು ಹೊತ್ತು ಎಡಿನಬರ್ಗ್ ಬೀದಿಗಳಲ್ಲಿ ಅಲೆದಾಡಿ ಯಾವುದೋ ಒಂದು ಅಗ್ಗದ ಕೆಫೆ ಹೊಕ್ಕು, ಬೆಚ್ಚನೆ ಕೆಫೆಯಲ್ಲಿ ಕೆಲವು ಗಂಟೆಗಳು ಕುಳಿತು ಬರೆಯುತ್ತಿದ್ದಳು. ಕಡೆಗೂ ಕತೆ ಬರೆದು ಮುಗಿಸಿ, ಜೆರಾಕ್ಸ್ ಮಾಡಿಸುವಷ್ಟು ಹಣವಿಲ್ಲದ ಕಾರಣ, ಎರಡು ಪ್ರತಿ ಟೈಪ್ ಮಾಡಿ, ಇಬ್ಬರು ಪ್ರಕಾಶಕರಿಗೆ ಕಳುಹಿಸಿದಳು. ಉಳಿದದ್ದೆಲ್ಲ ಇದೀಗ ಚರಿತ್ರೆಯಾಗಿದೆ. ಬಾಲ್ಯವನ್ನು ರೌಲಿಂಗ, ತನ್ನದೇ ಅಂತರಂಗದ ಕನಸಿನ ಲೋಕದಲ್ಲಿ ಕಳೆದವಳು. ಚಿಕ್ಕ ವಯಸ್ಸಿಗೇ ಲೇಖಕಿಯಾಗುವ ಆಸೆ ಮೂಡಿತ್ತು. ಆರನೇ ವರ್ಷದಲ್ಲಿಯೇ ಕತೆ ಬರೆಯಲು ಆರಂಭಿಸಿದ ರೌಲಿಂಗ್, ಒಂಬತ್ತನೇ ವಯಸ್ಸಿಗೆ ಐಯಾನ್ ಫ್ಲೆಮಿಂಗ್ ಪುಸ್ತಕಗಳನ್ನು ಓದಿ ಮುಗಿಸಿದ್ದಳು. ಜೇನ್ ಆಸ್ಟಿನ್ ಆಕೆಯ ಅಚ್ಚುಮೆಚ್ಚಿನ ಲೇಖಕಿ. ಮಕ್ಕಳಿಗೆ ಕನಸಿನ ಕಲ್ಪನಾ ಲೋಕಕ್ಕೆ ಬಾಗಿಲು ತೆರೆದ ರೌಲಿಂಗ್ ಇದೀಗ ಮಕ್ಕಳ ಸಾಹಿತ್ಯದಲ್ಲಿ ದೊಡ್ಡ ಬಿರುಗಾಳಿಯನ್ನೇ ತಂದಿದ್ದಾಳೆ.

## ರಾಗಿ ಮುದ್ದೆಗಾಗಿ ಪ್ರಾಣ ತೆಗೆದ ಪತಿ

ಹೆಣ್ಣಿನ ಜೀವ ಎಷ್ಟು ಅಗ್ಗವಾಗಿದೆ ಎಂದರೆ ಅದನ್ನು ತೆಗೆಯಲು ಒಂದು ರಾಗಿ ಮುದ್ದೆ ಕೂಡ ನೆಪವಾಗುತ್ತದೆ. ರಾಗಿ ಮುದ್ದೆ ಮಾಡಲಿಲ್ಲವೆಂದು ಪತ್ನಿಯೊಂದಿಗೆ ಜಗಳವಾಡಿ ಮಂಡ್ಯದ ರಂಗಸ್ವಾಮಿ, ನಾಗರತ್ನಳನ್ನು ಕೊಲೆ ಮಾಡಿದ. ಗಂಡನ ಸಿಟ್ಟು ಸೆಡವು, ಭುಗಿಲೇಳುವ ಕೋಪ ಇವುಗಳನ್ನು ನಮ್ಮ ಸಮಾಜ ಪೌರುಷದ ಕುರುಹಾಗಿ ಬೆಳೆಸಿ ಪೋಷಿಸುತ್ತದೆ. ಗಂಡು ಮಕ್ಕಳಿಗೆ ಚಿಕ್ಕಂದಿನಿಂದ ತಮ್ಮ ವಿಪರೀತದ ಭಾವನೆಗಳನ್ನು, ಕೋಪವನ್ನು ಹದ್ದುಬಸ್ತಿನಲ್ಲಿಟ್ಟುಕೊಳ್ಳುವುದನ್ನು ಹೇಳೀಕೊಟ್ಟಿಲ್ಲ ಎಂಬ ಅನುಮಾನ ಮೂಡುತ್ತದೆ. ಹೆಣ್ಣಿಗೆ ಸಹನೆ ಸಂಯಮವನ್ನು ಅಗಾಧವಾಗಿ ಬೋಧಿಸುವ ಸಮಾಜ, ಗಂಡಿನ ಸಿಟ್ಟನ್ನು ಅಪರೋಕ್ಷವಾಗಿ ಪ್ರೋತ್ಸಾಹಿಸುತ್ತದೆ. ನಮ್ಮ ಸಿನೆಮಾ ನಾಯಕರೆಲ್ಲ ಯಾವುದೋ ಒಂದು ನೆಪ ಇಟ್ಟು ಕೊಂಡ ಪ್ರಚಂಡ ಕೋಪಿಷ್ಟರೆ. 'ಆಂಗ್ರಿ ಯಂಗ್ ಮ್ಯಾನ್' ಇಮೇಜನಲ್ಲಿ ವಿಜೃಂಭಿಸಿದವರೆ. ಸಾತ್ವಿಕ ಗುಣದ ಮಾದರಿಗಳನ್ನು ನಮ್ಮ ಗಂಡು ಮಕ್ಕಳು ಎದುರು ಇಡಬೇಕಾದ ಅಗತ್ಯ ಎಂದಿಗಿಂತಲೂ ಇಂದು ಹೆಚ್ಚಿದೆ.

# ದೂರು ಪೆಟ್ಟಿಗೆಯಿಂದೇನು ಪ್ರಯೋಜನ ?

ದುಡಿಯುವ ಮಹಿಳೆಯರಿಗೆ ನ್ಯಾಯ ದೊರಕಿಸುವ ದಿಸೆಯಲ್ಲಿ ಮೂರು ವರ್ಷಗಳ ಹಿಂದೆಯೇ ಸರ್ವೋಚ್ಚ ನ್ಯಾಯಾಲವು ನೀಡಿದ ನಿರ್ದೇಶನಗಳನ್ನು ಜಾರಿಗೆ ತರುವಲ್ಲಿ ಸರ್ಕಾರಿ, ಅರೆ ಸರ್ಕಾರಿ ಹಾಗೂ ಖಾಸಗಿ ಮಾಲೀಕರು ಹಿಂದೆ ಬಿದ್ದಿದ್ದಾರೆ. ಅದರ ಫಲಶ್ರುತಿಯೆಂದರೆ ನೋವಿಗೀಡಾದ ಮಹಿಳೆಗೆ ಯಾವುದೇ ಪರಿಹಾರ ಸಿಗದಿರುವುದು.

ಕಳೆದ ವರ್ಷ, ರಾಜ್ಯಸಾರಿಗೆ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದ ಮಹಿಳಾ ಕಂಡಕ್ಟರ್ ಸವಿತಾ ನಾಯಕ್‌ಳ ಮೇಲಾದ ದೌರ್ಜನ್ಯವನ್ನು ಪ್ರತಿಭಟಿಸಿ ಅವಳಿಗೆ ನ್ಯಾಯ ದೊರಕಿಸಿಬೇಕೆಂದು ಮತ್ತು ರಾಜ್ಯ ಸಾರಿಗೆ ಸಮಿತಿಯಲ್ಲಿ 'ದೂರು ವಿಚಾರಣಾ ಸಮಿತಿ'ಯೊಂದನ್ನು ರಚಿಸಬೇಕೆಂದು ಒತ್ತಾಯಿಸಿ ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ಸದಸ್ಯೆಯರು ಸಾರಿಗೆ ಮಂತ್ರಿ ಸಗೀರ್ ಅಹಮದ್‌ರನ್ನು ಭೇಟಿಯಾಗಲು ಹೋಗಿದ್ದೆವು. ಅವರೊಡನೆ ನಮಗಾದ ಅನುಭವ ನಮ್ಮ ಶಾಸಕ ಮಹಾಶಯರು ಲಿಂಗನ್ಯಾಯದ ವಿಷಯದಲ್ಲಿ ಎಷ್ಟೊಂದು insensitive ಆಗಿ ಚಿಂತಿಸಬಲ್ಲರು ಎಂಬುದಕ್ಕೆ ಒಂದು ನಿದರ್ಶನ. 'ದೂರು ವಿಚಾರಣಾ ಸಮಿತಿ'ಯನ್ನು ರಚಿಸಲು ಒತ್ತಾಯಿಸಿದ್ದಕ್ಕೆ ಅದರಿಂದೇನು ಪ್ರಯೋಜನ ? ನಮ್ಮ ದೂರು ಪೆಟ್ಟಿಗೆಯಲ್ಲಿ ನೂರಾರು ದೂರುಗಳು ಬರುತ್ತವೆ. ಅವೆಲ್ಲ ಕಸದ ಬುಟ್ಟಿಗೆ ಹೋಗುತ್ತವೆ. ಅದರಿಂದ ಮಹಿಳೆಯರಿಗೇನು ಪ್ರಯೋಜನ ?' ಎಂದು ಅಜ್ಞರಾಗಿ ಉತ್ತರಿಸಿದರು. ನಮ್ಮ ಮನವಿಯಲ್ಲಿದ್ದ ಸುಪ್ರೀಂಕೋರ್ಟ್ ಹೇಳಿದ ದೂರು ವಿಚಾರಣೆ ಸಮಿತಿಯ ಸ್ವರೂಪದ ಬಗ್ಗೆ ಇದ್ದ ಮಾಹಿತಿಯನ್ನಾಗಲೀ, ಅದರೊಂದಿಗೆ ಲಗತ್ತಿಸಿದ್ದ ಸುಪ್ರೀಂಕೋರ್ಟಿನ ತೀರ್ಪಿನ ವಿವರಗಳ ಪ್ರತಿಯನ್ನಾಗಲಿ ನೋಡುವ ವ್ಯವಧಾನವೂ ಆ ಸಚಿವರಿಗೆ ಇರಲಿಲ್ಲ. ಅಲ್ಲದೆ ಭಾರತೀಯ ಮಹಿಳೆ ಹೇಗೆ ವಿಶ್ವಮಾನ್ಯಳು. ಅವಳ ಘನತೆಯನ್ನು ಕುಗ್ಗಿಸುವಂತಹ ಕೆಲಸವಾಗಬಾರದು ಎಂದು ನಮಗೇ ಉಪದೇಶ ಮಾಡಿದರು.

ಮಹಿಳೆಯರನ್ನು ಕುರಿತು ಈ ಧೋರಣೆ ಕೇವಲ ಸಾರಿಗೆ ಮಂತ್ರಿಗೆ ಮಾತ್ರ ಅನ್ವಯಿಸುವಂತಹುದೆಂದು ಸುಮ್ಮನೆ ಕೂರಬೇಕಾಗಿಲ್ಲ. ರಾಜ್ಯ ಸಾರಿಗೆ ಸಂಸ್ಥೆಯಲ್ಲಿ ಇಂತಹ ಪ್ರಕರಣಗಳು ಮೇಲಿಂದ ಮೇಲೆ ನಡೆಯುತ್ತಲೇ ಇವೆ. ಅಲ್ಲಿಗೆ ನಮ್ಮ ಬೇಡಿಕೆಯಂತೆ ರಚಿತವಾದ 'ಮಹಿಳೆಯರ ದೂರು ಸಮಿತಿ'ಯು ಕಾರ್ಮಿಕ ಮಹಿಳೆಯರ ಹಿತಕಾಯುವುದಕ್ಕಿಂತ ವ್ಯವಸ್ಥೆಯ ಸೂತ್ರದಲ್ಲಿಯೇ ಸಿಕ್ಕಿ ಬಿದ್ದಿದೆ.

ಈ ಸಂಸ್ಥೆಯಲ್ಲಿ ನಡೆದ ಮತ್ತೊಂದು ಪ್ರಕರಣದಲ್ಲಿ ಅನ್ಯಾಯಕ್ಕೊಳಗಾದ ಮಹಿಳೆಗೆ ಅಧಿಕಾರಶಾಹಿ ತೋರಿಸಿದ ಧೋರಣೆ ಸ್ಪಷ್ಟವಾಗಿ ಪ್ರಕಟವಾಗಿದೆ. ರಾಜ್ಯ ಸಾರಿಗೆ ಸಂಸ್ಥೆಯಲ್ಲಿ ಸಹಾಯಕಿ ಹುದ್ದೆಯಲ್ಲಿ ಕೆಲಸ ಮಾಡುತ್ತಿರುವ ರಮಾದೇವಿಗೆ ಕೆಲವು ಪುರುಷ ಸಹೋದ್ಯೋಗಿಗಳಿಂದ ಕಿರುಕುಳ, ಅವಾಚ್ಯ ಬೈಗುಳ -ಈ ಎಲ್ಲದರ ಜೊತೆಗೆ ತೊಂದರೆಕೊಡುವುದಾಗಿ ಬೆದರಿಕೆ. ತನ್ನ ಮೇಲಧಿಕಾರಿಗಳಿಗೆ ದೂರಿತ್ತು ಪೋಲೀಸರ ರಕ್ಷಣೆ ಕೋರಿ, ತನಗಾದ ಅನ್ಯಾಯಕ್ಕೆ ಪ್ರತಿಭಟಿಸಿ ನ್ಯಾಯ ಕೇಳಲು ಮಂತ್ರಿಗಳ ಬಳಿ ಹೋದಾಗ 'ನೀನು ಇಲ್ಲೇ ಇಷ್ಟು ಜೋರಾಗಿ ಮಾತಾಡ್ತಿ ಇನ್ನು ಆಫೀಸಲ್ಲಿ ಎಷ್ಟು ಮಾತಾಡಿರಬಹುದು' ಎಂದು ಆಪಾದಿಸಿದ್ದೂ ಅಲ್ಲದೆ 'ನೋಡಮ್ಮಾ ಬೇಕಾದ್ರೆ ನಿನ್ನ ಟ್ರಾನ್ಸ್‌ಫರ್ ಮಾಡ್ತಿನಿ. ಅವ್ರನ್ನ ಮಾತ್ರ ಏನೂ ಮಾಡಕ್ಕಾಗಲ್ಲ' ಎಂದಾಗ ನ್ಯಾಯ ನಿರೀಕ್ಷಿಸಿ ಹೋದವರಿಗೆ ಹೇಗಿರಬೇಡ! ಈ ಗಾಯಕ್ಕೆ ಬರೆ ಇಟ್ಟವರು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವೆ ಮೋಟಮ್ಮ. ರಮಾದೇವಿ ಅವರಲ್ಲಿ ದೂರು ಹೇಳಿ ನ್ಯಾಯ ಕೇಳಲು ಹೋದಾಗ ಈ ಸಚಿವೆ 'ಅಲ್ರೀ ಅಷ್ಟೊಂದು ತೊಂದ್ರೆ ಆಗ್ತಾ ಇದ್ರೆ ಕೆಲಸಕ್ಕೆ ರಾಜೀನಾಮೆ ಕೊಟ್ಟು ಮನೇಲಿದ್ದು ಮಕ್ಕಳನ್ನು ಆಡಿಸಿಕೊಂಡಿರಿ' ಎಂದು ನೀಡಿದ್ದು ದಿವ್ಯ ಸಲಹೆ.

ಇಂತಹ ಧೋರಣೆ ಸಮಾಜದ ಎಲ್ಲ ಕಛೇರಿ, ವಿಭಾಗಗಳಲ್ಲೂ ವಿಭಿನ್ನ ರೀತಿಯಲ್ಲಿ ಕಂಡು ಬರುತ್ತಲೇ ಇವೆ. ಚಿನ್ಮಯ ಮಿಷನ್ ಆಸ್ಪತ್ರೆ ಮತ್ತು ಅಂಬೇಡ್ಕರ್ ಮೆಡಿಕಲ್ ಕಾಲೇಜಿನಲ್ಲಿ ಕಂಡು ಬಂದ ಲೈಂಗಿಕ ಹಗರಣದ ಪ್ರಸಂಗಗಳು ಸೇವಾಕ್ಷೇತ್ರದಲ್ಲಿ ಉಂಟಾಗುವ ಹೊಸ ಸಮಸ್ಯೆಗಳ ಸ್ವರೂಪವನ್ನು ಬಯಲಿಗೆಳೆಯುತ್ತಿವೆ. ಈ ಎಲ್ಲದರ ಹಿನ್ನೆಲೆಯಲ್ಲಿ ದುಡಿಯುವ ಮಹಿಳೆಯರ ಸಮಸ್ಯೆಗೆ ಒಂದು ವ್ಯಾಪಕವಾದ ಅಧ್ಯಯನ ಮತ್ತು ಪರಿಹಾರದ ಅಗತ್ಯವನ್ನು ಯೋಜಿಸಿ ರೂಪಿಸಬೇಕಾದ ಅಗತ್ಯವಿದೆ.

- ಅಚಲ

## ಮತ್ತೆ ಸುದ್ದಿಯಲ್ಲಿ ಕಮಲಾ 'ಸುರಯ್ಯಾ'

ಕಮಲಾ ದಾಸ್, ಕಮಲಾ ಸುರಯ್ಯಾ ಆಗಿ ಕೇವಲ ಎಂಟು ತಿಂಗಳು. ಬುರ್ಖಾ ಹಾಕಿಕೊಂಡೊಡನೆ ಒಳಗಿನ ಕಮಲಾ ಬದಲಾಗಲು ಸಾಧ್ಯವೇ? ಮತಾಂತರವಾದ ಆರಂಭದಲ್ಲಿ ಇಸ್ಲಾಂ ಧರ್ಮವನ್ನು ಹೊಗಳಾಡಿ, ಹಿಂದೂ ಧರ್ಮವನ್ನು ತೆಗಳಾಡಿ, ಹಿಂದೂಗಳನ್ನು ಸಿಟ್ಟಿಗೇಳಿಸಿದ್ದ ಕಮಲಾ, ಈಗ ಮುಸ್ಲಿಮ್ ಬಾಂಧವರನ್ನು ಅಪ್ರಸನ್ನಗೊಳಿಸಿದ್ದಾರೆ. 'ನಾನು ನನ್ನ ಸ್ವಾತಂತ್ರ್ಯವನ್ನು ಬಿಟ್ಟುಕೊಟ್ಟಿದ್ದೇನೆ. ಸ್ವಾತಂತ್ರ್ಯ ನನ್ನನ್ನು ತೀರಾ 'ಷ್ಯಾಬಿ'ಯಾಗಿ ಮಾಡಿತ್ತು. ಇಸ್ಲಾಂ ಕಟ್ಟುನಿಟ್ಟಿನದು. ನಾನು ಅಲ್ಲಾನನ್ನು ನನ್ನ ಒಡೆಯನೆಂದು ಭಾವಿಸುತ್ತೇನೆ. ನಾನಾತನ ಅಡಿಯಾಳು' ಎಂದು ಸಾರಿದ್ದ ಕಮಲಾರವರ ಲೇಖನಿ ಅಷ್ಟು ಸುಲಭವಾಗಿ ಧರ್ಮದ ಕಟ್ಟುನಿಟ್ಟನ್ನಾಗಲಿ, ಬಂಧನವನ್ನಾಗಲಿ ಒಪ್ಪಿಕೊಳ್ಳುವುದುಂಟೆ. ಅವರ ಉತ್ಕಟ ಬರಹಗಳನ್ನು ಹತ್ತಿಕ್ಕುವುದು ಸ್ವತಃ ಕಮಲಾಗೂ ಸಾಧ್ಯವಾಗಿಲ್ಲ. 'ಪ್ರಿಯಕರನೇ ದೇವರಿಗಿಂತ ಮೇಲಿನವನು' ಎಂದು ಉತ್ಕಟ ಪ್ರೀತಿಯ ಕವನಗಳನ್ನು ಬರೆದು ಮುಸ್ಲಿಮ್ ಬಾಂಧವರ ಕೋಪಕ್ಕೆ ಗುರಿಯಾಗಿದ್ದಾರೆ. 'ನನಗೀಗ ನಗ್ನ ದೇಹವನ್ನು ಬರೆಯಲು ಸಾಧ್ಯವೇ ಇಲ್ಲ. ಇಸ್ಲಾಂ ಧರ್ಮದ ಪ್ರಕಾರ ಅದು ಹರಾಮ್' ಎಂದಿದ್ದ ಆಕೆಯ ಬೆರಳುಗಳು ಮತ್ತೆ ನಗ್ನ ಸ್ತ್ರೀಯರ ಚಿತ್ರಗಳನ್ನು ಬಿಡಿಸುತ್ತಿವೆ. ಹೆಣ್ಣೊಬ್ಬಳು 'ಮೈ ಸ್ಟೋರಿ'ಯಂಥಾ ನಾನ್ಸೆನ್ಸ್ ಬರೆಯಲು ಧರ್ಮ ಬಿಡಬಾರದು' ಎಂದು ಘೋಷಿಸಿದ್ದ ಕಮಲಾ ಈಗ ಮತ್ತೊಂದೇ ಹಾಡು ಹಾಡುತ್ತಿದ್ದಾರೆ. 'ನಾನು ವಯಸ್ಸಾದ ಮುಸ್ಲಿಮ್ ಮಹಿಳೆಯಂತೆ ದಿನವೆಲ್ಲ ಪ್ರಾರ್ಥನೆಯಲ್ಲಿ ಕಳೆಯುತ್ತೇ, ಪ್ರೀತಿ ಸೌಂದರ್ಯದ ಬಗ್ಗೆ ಮಾತನಾಡದೆ ತೆಪ್ಪಗಿರುತ್ತೇನೆ ಎಂದು ಭಾವಿಸಿದ್ದರು. ನಾನಿದಕ್ಕೆಲ್ಲ ಬಾಗುವವಳಲ್ಲ' ಎಂದು ದೂರುತ್ತಿದ್ದಾರೆ. ಅದೇ ಉಸುರಿನಲ್ಲಿ 'ತಾನು ನಿಜವಾದ ಮುಸ್ಲಿಮಳಂತೆ ದಿನಕ್ಕೆ ಐದು ಬಾರಿ ನಮಾಜ್ ಮಾಡುತ್ತೆನೆ, ಪ್ರತಿ ರಾತ್ರಿ ಮೂರು ಗಂಟೆಗೆ ವಿಶೇಷ ಪ್ರಾರ್ಥನೆ ಸಲ್ಲಿಸುತ್ತೇನೆ' ಎಂದೂ ಹೇಳುತ್ತಾರೆ. ಇತ್ತೀಚೆಗೆ ಕೆನಡಾಗೆ ಹೋದ ಕಮಲಾ ಸುರಯ್ಯಾ ಹನ್ನೆರಡು ಪ್ರೇಮಗೀತೆಗಳನ್ನು ಬರೆದು. ಗಂಡಿನತ್ತಲ ಹೆಣ್ಣಿನ ಉತ್ಕಟ ಪ್ರೀತಿಯ ಈ ಕವಿತೆಗಳನ್ನು ಕಮಲಾ ಸದ್ಯಕ್ಕೆ ಭಾರತದಲ್ಲಿ ಪ್ರಕಟಿಸುತ್ತಿಲ್ಲ. ಆಕೆಯ ಆತ್ಮ ಚರಿತ್ರೆ 'ಮೈ ಸ್ಟೋರಿ'ಯನ್ನು ಕೆನಾಡಾ ಫಿಲ್ಮ್ ಕಂಪನಿಯೊಂದು ಚಲನಚಿತ್ರವಾಗಿಸುತ್ತಿದೆ. ಇದರಲ್ಲಿ ಸುರಯ್ಯಾ ಕೆಲ ನಿಮಿಷಗಳು ಕಾಣಿಸಿಕೊಳ್ಳುತ್ತಾರೆ. ಎಂಟು ತಿಂಗಳ ಹಿಂದೆ 'ಮೈ ಸ್ಟೋರಿ'ಯನ್ನು 'ನಾನ್ಸೆನ್ಸ್' ಎಂದು ಬಿಸುಟು ಈ ಲೇಖಕಿಗೆ ಅದು ಚಲನಚಿತ್ರವಾಗುತ್ತಿದ್ದಂತೆ ಅದರಲ್ಲಿಯೇ 'ಸೆನ್ಸ್' ಕಂಡಿರಬೇಕು.

## ಸಾವಿರ ಮೈಲಿ ಹಾದು ಬಂದ ಇಂಗ್ಲಿಷ್ ಮಹಿಳೆ

ಇಂಗ್ಲಿಷ್ ಸ್ಕೂಲ್ ಟೀಚರ್ ಆನ್ನಾ ಲಿಯನೋವೆನ್ಸ್, ವಿಕ್ಟೋರಿಯನ್ ಯುಗದಲ್ಲಿ ಯಾವ ಹೆಂಗಸೂ ಮಾಡದಿದ್ದ ಸಾಹಸವನ್ನು ಮಾಡಿದಾಕೆ. ಎಳೆಯ ವಿಧವೆ ಆನ್ನಾ, ತನ್ನ ಪುಟ್ಟ ಮಗನೊಡನೆ ಸಾವಿರಾರು ಮೈಲಿಗಳು ಪಯಣಿಸಿ ಥೈಲಾಂಡಗೆ ಬಂದಳು. ರಾಜ ಮಾಂಗ್ಕಟನ 58 ಮಕ್ಕಳಿಗೆ ಪಾಠ ಹೇಳಿಕೊಡಲು ಆನ್ನಾಳನ್ನು ನೇಮಿಸಲಾಯಿತು. ಪೂರ್ವದೇಶದ ಈ ರಾಜ ಅನಾಗರೀಕ ಎಂದು ಆನ್ನಾ ಭಾವಿಸಿದ್ದರೆ, ಪಶ್ಚಿಮದ ಈ ಹೆಂಗಸಿನ ಬಗ್ಗೆ ರಾಜನಿಗೆ ತನ್ನದೇ ಆದ ಪೂರ್ವಾಗ್ರಹಳಿದ್ದವು. ಆದರೆ ಸಮಯ ಕಳೆದಂತೆ ಆನ್ನಾ ಮತ್ತು ರಾಜನ ನಡುವೆ ಒಂದು ವಾತ್ಸಲ್ಯದ ಸಂಬಂಧ ಏರ್ಪಟ್ಟು, ಆನ್ನಾ ಈ ರಾಜ ತನ್ನ ಪ್ರಜೆಗಳ ಹಿತಾಸಕ್ತಿಯನ್ನು ಕಾಯುವ ನಿಜವಾದ ದಾರ್ಶನಿಕ ಎಂದು ಅರಿಯುತ್ತಾಳೆ. ಪಶ್ಚಿಮದ ಈ ಹೆಣ್ಣು ತನ್ನ ದೇಶಕ್ಕೆ ನಿಜವಾದ ಬೆಳಕನ್ನು, ಕಲಿಕೆಯ ಬೆಳಕನ್ನು ತಂದದ್ದನ್ನು ರಾಜ ಗುರುತಿಸುತ್ತಾನೆ ಚರಿತ್ರೆಯ ಈ ಸುಂದರ ಕತೆ 'ಆನ್ನಾ ಅಂಡ್ ದಿ ಕಿಂಗ್' ಚಲನಚಿತ್ರವಾಗಿ ಮೂಡಿ ಬಂದಿದೆ.

## ಭೂಪ್ರದಕ್ಷಿಣೆಗೆ ಹೊರಟ ಅರವತ್ತರ ಅಜ್ಜಿ

ಅರವತ್ತನೇಯ ವಯಸ್ಸಿನಲ್ಲಿ ತಮ್ಮ ಮೊಮ್ಮಕ್ಕಳನ್ನು ಆಡಿಸಿಕೊಂಡು ತಮ್ಮ ಬದುಕು ಇಲ್ಲಿಗೇ ಮುಗಿಯಿತು ಎನ್ನುವ ಅಜ್ಜಿಯರೇ ಹೆಚ್ಚು. ಆದರೆ ಅರವತ್ತು ವಯಸ್ಸಿನ ಒಬ್ಬ ಅಜ್ಜಿ, ಒಂದು ಹೆಲಿಕಾಪ್ಟರಿನಲ್ಲಿ ಕುಳಿತು ಏಕಾಂಗಿಯಾಗಿ ಭೂಮಿಯನ್ನು ಪ್ರದಕ್ಷಿಣೆ ಹಾಕುತ್ತಿದ್ದಾಳೆ. ಜೆನಿಫರ್ ಮುರ್ರೆ ಅರವತ್ತು ವರ್ಷದ ಮಹಿಳೆ, ಭಾರತದ ಮೂಲಕ ತಮ್ಮ ಹೆಲಿಕಾಪ್ಟರಿನಲ್ಲಿ ಹಾದು ಹೋದರು. ಈಕೆ 1997ರಲ್ಲಿ, ಓರ್ವ ಸಹಚಾಲಕನೊಡನೆ ಭೂ ಪ್ರದಕ್ಷಿಣೆ ಹಾಕಿದ್ದರು. ಇದೀಗ ಏಕಾಂಗಿಯಾಗಿ ಹೆಲಿಕಾಪ್ಟರಿನಲ್ಲಿ ಹೊರಟಿದ್ದಾರೆ. 'ಹಿರಿಯ ಮಹಿಳೆಯರಲ್ಲಿ ಉತ್ಸಾಹ ತುಂಬುವುದು ತನ್ನ ಪ್ರದಕ್ಷಿಣೆಯ ಒಂದು ಉದ್ದೇಶ' ಎನ್ನುವ ಜೆನಿಫರ್ 'ಮಕ್ಕಳ ಚಾರಿಟಿಗೆ 4.4 ಕೋಟಿ ರೂಪಾಯಿ ಹಣವನ್ನು ಎತ್ತುವುದು ಇದರ ಮತ್ತೊಂದು ಉದ್ದೇಶ' ಎನ್ನುತ್ತಾರೆ. 40,000 ಕಿಲೋಮೀಟರನ್ನು ಆವರಿಸುವ ಈಕೆಯ ಪಯಣ 33 ದೇಶಗಳನ್ನು ಮುಟ್ಟಿ ಸಾಗಲಿದೆ.

# ಸತ್ಯದೊಡನೆ ಪ್ರಯೋಗಗಳು

ಪ್ರೊ. ಎಂ.ಎಸ್. ಪ್ರಸನ್ನ ನಿಜಕ್ಕೂ ದಿಟ್ಟ ತಾಯಿ ಮಾತ್ರವಲ್ಲ, ತಪ್ಪು ಹಾದಿಗಿಳಿದ ಮಗನನ್ನು ಸರಿ ಹಾದಿಗೆಳೆದ ಸಾಹಸಿ ತಾಯಿ. ಬ್ಯಾಂಕ್ ಒಂದನ್ನು ಲೂಟಿ ಮಾಡಿದ ಮಗ ಅರುಣಗೆ ಬುದ್ಧಿ ಹೇಳಿ, ಕಾನೂನಿಗೆ ತನ್ನನ್ನು ತಾನು ಒಪ್ಪಿಸಿಕೊಳ್ಳುವಂತೆ ಮಾಡಿದ ಮಹಾಮಾತೆ ಪ್ರೊ. ಪ್ರಸನ್ನ. ವಿಪರ್ಯಾಸವೆಂದರೆ ನೈತಿಕ ಅಂಧಃ ಪತನಕ್ಕಿಳಿದ ಸಮಾಜದಲ್ಲಿ ಆಕೆಯ ಆದರ್ಶವಾದ, ಆಕೆಗೇ ಅಪಾಯ ತಂದು, ತಿರುಗಿ ಬಿದ್ದಿದೆ. ಇಂತಹ ತಾಯಿಗೆ ಮೆಚ್ಚುಗೆ, ಪುರಸ್ಕಾರದ ಬದಲು, ಪೋಲೀಸರ ಕಿರಿಕಿರಿ, ಸಮಾಜದ ಕುಹಕ ಎದುರಾಗಿದೆ. 'ಕಳ್ಳನನ್ನು ನಾವೇ ಹಿಡಿದೆವು' ಎಂದು ಮೆರೆಯುತ್ತಿದ್ದ ಪೋಲೀಸರ ಬಡಾಯಿಯನ್ನು ತೆರೆದಿಟ್ಟ ತಪ್ಪಿಗೆ ಪ್ರಸನ್ನ ಎಲ್ಲಿಲ್ಲದ ತೊಂದರೆ ಅನುಭವಿಸುತ್ತಿದ್ದಾರೆ. 'ನಾವು ಹೇಳಿದಂತೆ ಕೇಳದಿದ್ದರೆ ಬ್ಯಾಂಕ್ ದರೋಡೆಯಲ್ಲಿ ನಿನ್ನ ಪಾಲೂ ಇದೆ ಎಂದು ಆಪಾದನೆ ಹೇರುತ್ತೇವೆ' ಎಂಬ ಬೆದರಿಕೆ ಎದುರಿಸಬೇಕಾದ ಈ ತಾಯಿಯ ಹೋರಾಟ ಈಗ ಆರಂಭವಾಗಿದೆ.

ಒಂದು ವರ್ಷದ ಹಿಂದೆ ಕೇರಳದ ಎಸ್.ಎನ್. ಕಾಲೇಜಿನ ಸಸ್ಯಶಾಸ್ತ್ರದ ಪ್ರೊಫೆಸರ್ ಆದ ಪ್ರಸನ್ನಾ ಏಳು ಗಂಟೆಯ ಸುಮಾರಿಗೆ ಮನೆಗೆ ಹಿಂತಿರುಗಿದಳು. ಆಕೆಗೆ ಅಂದು ಮಗನ ಮಂಚದ ಕೆಳಗೆ ರೂಪಾಯಿ ನೋಟು ಭರ್ತಿ ಇದ್ದ ಸೂಟಕೇಸ ಕಾಣಿಸಿತು. ದಿನವೆಲ್ಲ ವೀಡಿಯೋ ಆಟ ಆಡುತ್ತಾ ಗುಂಪು ಗೆಳೆಯರೊಂದಿಗೆ ಅಲೆಯುವ ಮಗ ಅರುಣ್, ಡಿಗ್ರಿಯನ್ನೂ ಮುಗಿಸದೆ ಕಾಲೇಜು ಬಿಟ್ಟವನು. ಹಣವನ್ನು ಪ್ರಸನ್ನ ಎಣಿಸಿ ನೋಡಿದಾಗ, ಅಲ್ಲಿ ಎರಡು ಲಕ್ಷ, ಮುವತ್ತು ಸಾವಿರು ರೂಪಾಯಿಗಳಿತ್ತು! ಮೂರು ದಿನಗಳ ಹಿಂದೆ ಬ್ಯಾಂಕ್ ಒಂದರಲ್ಲಿ ಲೂಟಿ ಮಾಡಿದ ಹಣದ ಮೊತ್ತ ಇದೇ ಆಗಿದ್ದು ಸುದ್ದಿ ಪತ್ರಿಕೆಯಲ್ಲಿ ಪ್ರಸನ್ನ ಓದಿದ್ದರು. ಅವರ ಎದೆ ಹೊಡೆದು ಕೊಂಡಿತು. ಆ ಕ್ಷಣ ಮಗನನ್ನು ಕೊಂದು ತಾವೂ ಆತ್ಮಹತ್ಯೆ ಮಾಡಿಕೊಳ್ಳಲು ಮನಸ್ಸು ಯೋಚಿಸಿತು. ನಿಧಾನವಾಗಿ ಮನಸ್ಸನ್ನು ಹತೋಟಿಗೆ ತಂದುಕೊಂಡರು. ತಾನು ಆ ಪರಿಸ್ಥಿತಿಯನ್ನು ಓರ್ವ ಪ್ರೀತಿಯ ತಾಯಿಯಾಗಿ, ಅದೇ ಸಮಯದಲ್ಲಿ ಜವಾಬ್ದಾರಿಯುತ ಪ್ರಜೆಯಾಗಿ ಎದುರಿಸಬೇಕು ಎಂದು ನಿರ್ಧರಿಸಿದಳು. 'ಅರುಣ ನನ್ನ ಮಗ, ನನ್ನ ಹೃದಯ ಅವನಲ್ಲಿದೆ. ಆದರೆ ಆ ಕಾರಣದಿಂದ ಆತನ ತಪ್ಪಿಗೆ ಶಿಕ್ಷೆ ತಪ್ಪಬೇಕೆಂದು ನಾನು ಬಯಸುವುದಿಲ್ಲ' ಎನ್ನುತ್ತಾರೆ ಈ ತಾಯಿ.

ಅರುಣ್ ಮನೆಗೆ ಬಂದಾಗ, ಪ್ರಸನ್ನ ಆತನನ್ನು ಪ್ರಶ್ನಿಸಿದರು. ಆಕೆಯ ಅನುಮಾನ ಸತ್ಯವಾಗಿತ್ತು. ಬ್ಯಾಂಕು ಲೂಟಿ ಮಾಡಿದ್ದನ್ನು ಮಗ ಒಪ್ಪಿಕೊಂಡ. ಪ್ರಸನ್ನ ಮಗನನ್ನು ಪೋಲೀಸರಿಗೆ ಶರಣಾಗುವಂತೆ ಒತ್ತಾಯಿಸಿದಳು. 'ನೀನು ಈ ಹಣದಿಂದ ಇಡೀ ಸಾಮ್ರಾಜ್ಯವನ್ನೇ ಕಟ್ಟಬಹುದು, ಆದರೆ ಯಾವ ತಾಯಿಯೂ ಕೆಟ್ಟ ಮಗನನ್ನು ಹೆಮ್ಮೆಯಿಂದ ನೋಡುವುದಿಲ್ಲ' ಎಂದು ತಿಳಿ ಹೇಳಿದಳು. ಮಗ ಇಂತಹ ಕೆಲಸ ಏಕೆ ಮಾಡಿದ ಎಂಬುದಕ್ಕೆ ಅವನಲ್ಲಿಯೂ ಉತ್ತರವಿರಲಿಲ್ಲ. ಪ್ರಸನ್ನ ಅವರಿಗೆ ಆಘಾತವಾದದ್ದೆಂದರೆ, ಅವರ ಜಂಟಿ ಅಕೌಂಟಿನಿಂತ ಆತ ಆಕೆಯ ಅರಿವೇ ಇಲ್ಲದೆ ಎರಡು ಲಕ್ಷ ತೆಗೆದುಕೊಳ್ಳಲು ಸಾಧ್ಯವಿತ್ತು, ಹೀಗಿರುವಾಗ ಎರಡು ಲಕ್ಷಕ್ಕೆ ಬ್ಯಾಂಕ್ ದರೋಡೆ ಮಾಡಿದ್ದೇಕೆ ಎಂಬುದು ಅವರಿಗೆ ಯಕ್ಷಪ್ರಶ್ನೆಯಾಗಿದೆ. ಬಹುಶಃ ಈ ಕಿಶೋರ ವಯಸ್ಸಿನ ಹುಡುಗ ತನ್ನ ಸಿನೆಮಾ ನಾಯಕರನ್ನು ಅನುಕರಿಸುತ್ತಿದ್ದ.

ಪೋಲೀಸರು ಅದಾಗಲೆ ಪ್ರತ್ಯಕ್ಷ ಸಾಕ್ಷಿಗಳ ವಿವರಣೆಯನ್ನು ಹೋಲುತ್ತಿದ್ದ ಬ್ಯಾಂಕಿನ ಕೆಲಸಗಾರನೊಬ್ಬನನ್ನು ಬಂಧಿಸಿಟ್ಟಿದ್ದರು. ಯಾವ ರೀತಿಯಲ್ಲೂ ಅರುಣನನ್ನು ಅನುಮಾನಿಸಲು ಸಾಧ್ಯವಿರಲಿಲ್ಲ. ಕ್ಯಾಷಿಯಾರ್ ದರೋಡೆಕೋರನನ್ನು 'ಮುವತ್ತು ವರ್ಷದ ಗೋಧಿ ಬಣ್ಣದ ಮನುಷ್ಯ' ಎಂದು ವರ್ಣಿಸಿದ್ದ. ಹತ್ತೊಂಬತ್ತು ವರ್ಷದ ಕಪ್ಪು ಬಣ್ಣದ ಅರುಣನನ್ನು ಯಾರೂ ಅನುಮಾನಿಸುವಂತಿರಲಿಲ್ಲ.

ಪ್ರಸನ್ನ ಓರ್ವ ನ್ಯಾಯವಾದಿಯ ಸಲಹೆ ಪಡೆದು ಪೋಲೀಸ್ ಡೆಪ್ಯುಟಿ ಸೂಪರಿಂಟೆಂಡೆಂಟ್ ರಾಧಾಕೃಷ್ಣ ನಾಯರ್ ಅವರನ್ನು ಭೇಟಿಯಾದರು. ಮರು ದಿನ ಕದ್ದ ಹಣವನ್ನೆಲ್ಲ ಅವರಿಗೆ ಕೊಂಡೊಯ್ದು ಒಪ್ಪಿಸಿದರು. ಅರುಣನೂ ತಾಯಿಯ ಆದೇಶದಂತೆ ಶರಣಾದ. ಕೊಚಿನ್‌ನ ಪೋಲೀಸ್ ಕಮಿಷನರ್ ಬಂದು ತಾಯಿಯ ದಿಟ್ಟತನವನ್ನು ಹಾಡಿ ಹೊಗಳಿದರು. ಆದರೆ ಈ ಎಲ್ಲ ಸಮಯದಲ್ಲಿ ಪೋಲೀಸರು ಸುಳ್ಳು ಕತೆಯನ್ನು ಹೆಣೆದು ತಾಯಿ ಮಗ ಇಬ್ಬರನ್ನೂ ಸಿಕ್ಕಿ ಹಾಕಿಸಿ ತಮ್ಮ ಪ್ರತಾಪವನ್ನು ಮೆರೆಯಲಿದ್ದಾರೆ ಎಂದು ಈ ತಾಯಿಗೆ ತಿಳಿದಿರಲಿಲ್ಲ. 'ಕಳ್ಳನನ್ನು ನಾವು ಹಿಡಿದೆವು' ಎಂದು ಮಾಧ್ಯಮಗಳೆದುರು ಪೋಲೀಸರು ಸಾರಿ ಸಾರಿ ಹೇಳಿದಾಗ ಪ್ರಸನ್ನಾಗೆ ನಿಜಕ್ಕೂ ಕೋಪ ಬಂದಿತು. ಪ್ರಸನ್ನ ಪೋಲೀಸ್ ಸುದ್ದಿ ಸುಳ್ಳೆಂದು ಪತ್ರಿಕಾ ಹೇಳಿಕೆ ನೀಡಿದ್ದು ಪೋಲೀಸರನ್ನು ವಿಪರೀತ ಸಿಟ್ಟೀಗೇರಿಸಿತು. 'ತೆಪ್ಪಗಿರದಿದ್ದರೆ ನಿನ್ನನ್ನೂ ದರೋಡೆಯಲ್ಲಿ ಶಾಮಿಲು ಮಾಡಿ ಬಂಧಿಸುತ್ತೇವೆ' ಎಂದು ಬೆದರಿಸಿದರು. ಸತ್ಯದ ಹಾದಿಯಲ್ಲಿ ನಡೆಯುವ ಧೈರ್ಯ ತೋರಿದ ಮಹಿಳೆಯನ್ನು ಇಡೀ ವ್ಯವಸ್ಥೆ ತುಳಿಯಲು ಹೊರಟಿದೆ. ತಮ್ಮ ಸತ್ಯದ ಕತೆಯನ್ನು ಜನಕ್ಕೆ ತಲುಪಿಸಲು ಹೆಣಗುತ್ತಿರುವ ಪ್ರಸನ್ನ ಎದುರು ಹೋರಾಟದ ಸುದೀರ್ಘ ಹಾದಿ ಕಾದು ನಿಂತಿದೆ. ●

## ಹ್ಯಾರಿ ಪಾಟರ್‌ನ ಮಾಯಾಲೋಕ

ನೀವು ಎಲ್ಲೆಲ್ಲಿಯೂ ಕೇಳುತ್ತಿರುವ ಹೆಸರು - 'ಹ್ಯಾರಿ ಪಾಟರ್'. ಮಕ್ಕಳ ಪುಸ್ತಕ 'ಹ್ಯಾರಿ ಪಾಟರ್' ಪ್ರಚಂಡ ಯಶಸ್ಸನ್ನು ಪಡೆದಿದೆ. ಹ್ಯಾರಿ ಪಾಟರ್ ಕುರಿತ 640 ಪುಟಗಳ ನಾಲ್ಕನೇ ಪುಸ್ತಕವನ್ನು ಕೊಳ್ಳಲು ಮಧ್ಯರಾತ್ರಿ ಮಕ್ಕಳು ಕ್ಯೂ ನಿಂತು ಕಾದಿದ್ದರು! ಈ ಮಕ್ಕಳ ಪುಸ್ತಕ 'ಹ್ಯಾರಿ ಪಾಟರ್' ದುಷ್ಟ ಶಕ್ತಿಯ ವಿರುದ್ಧ ಹೋರಾಡುವ ಹನ್ನೊಂದು ವರ್ಷದ ಪುಟ್ಟ ಬಾಲಕ. ಮಾಯಾಮಂತ್ರಗಳ ಅದ್ಭುತ ಲೋಕದ ಸೃಷ್ಟಿ ಈ ಪುಸ್ತಕಗಳಲ್ಲಿ. ಕೊಲೆಯಾದ ತಂದೆ ತಾಯಿ, ಬೇರೆ ದಾರಿ ಕಾಣದೆ ಕ್ರೂರಿ ಅಂಕಲ್ ಮತ್ತು ಆಂಟ್ ಜೊತೆಯಲ್ಲಿ ಬದುಬೇಕಾದ ಅನಿವಾರ್ಯ, ಅಲ್ಲಿಂದ ಆರಂಭವಾಗುತ್ತದೆ ಪುಟ್ಟ ಬಾಲಕ ಹ್ಯಾರಿ ಪಾಟರನ ಅದ್ಭುತ ಸಾಹಸಗಳು, ಪುಟ್ಟ ಮಕ್ಕಳನ್ನು ಹಿಡಿದಿಡುವ ಕಲ್ಪನಾ ಜಗತ್ತು.

1997ರಲ್ಲಿ ಹೊರ ಬಂದ ಮೊಟ್ಟಮೊದಲ 'ಹ್ಯಾರಿ ಪಾಟರ್ ಅಂಡ್ ದಿ ಫಿಲಾಸಫರ್ಸ್ ಸ್ಟೋನ್' ಎಂಬ ಪುಸ್ತಕದ 70,000 ಪ್ರತಿಗಳು ಬ್ರಿಟನ್ ಒಂದರಲ್ಲಿಯೇ ಮಾರಾಟವಾದವು. ಮತ್ತೆ ಎಂಟು ದೇಶಗಳಲ್ಲಿ ಮಾರಾಟವಾದ ಈ ಪುಸ್ತಕದ ಅಮೆರಿಕನ್ ಹೊತ್ತಿಗೆಗೆ ಒಂದು ಲಕ್ಷ ಡಾಲರ್ ಹಣವನ್ನು ಮುಂಗಡವಾಗಿ ನೀಡಲಾಯಿತು. ಯಾವುದೇ ಲೇಖಕರ ಮೊದಲ ಪುಸ್ತಕಕ್ಕೆ, ಅದರಲ್ಲೂ ಮಕ್ಕಳ ಪುಸ್ತಕಕ್ಕೆ ಇಷ್ಟು ಹಣ ನೀಡಿದ್ದು ಕೇಳಿರಲಿಲ್ಲ. ಹ್ಯಾರಿ ಪಾಟರ್ ಮೂರನೇ ಪುಸ್ತಕ 1999 ರಲ್ಲಿ ಹೊರಬಂದಾಗ, 70 ಲಕ್ಷ ಪ್ರತಿಗಳು ಮಾರಾಟವಾದವು. ಭಾರತದಲ್ಲಿ 30,000 ಪ್ರತಿಗಳು ಮಾರಾಟವಾದವು. ಇದೀಗ ಹೊರ ಬಂದಿದೆ ನಾಲ್ಕನೆ ಹ್ಯಾರಿ ಪ್ಯಾಟರ್ ಪುಸ್ತಕ. ಪುಸ್ತಕ ಹೊರಬರುವ ಮೊದಲೆ 53 ಲಕ್ಷ ಪ್ರತಿಗಳು ಮುಂಗಡವಾಗಿ ಕಾದಿರಿಸಲ್ಪಟ್ಟಿದ್ದವು!

ಅಂದಹಾಗೆ, ಈ ಅದ್ಭುತ ಮಕ್ಕಳ ಪುಸ್ತಕಗಳ ಕತೆಗಾರ್ತಿ, ಜೆ.ಕೆ. ರೌಲಿಂಗ್ ಎಂಬ 34 ವರ್ಷಗಳ ಮಹಿಳೆ. ಆಕೆ ದೊಡ್ಡವರಿಗಾಗಿ ಬರೆದ ಎರಡು ಕಾದಂಬರಿಗಳೂ ಪ್ರಕಟವಾಗಲೇ ಇಲ್ಲ. ಶಾಲೆಯೊಂದರಲ್ಲಿ ಟೀಚರ್ ಕೆಲಸ ಮಾಡುತ್ತಿದ್ದ ಆಕೆ ಲೇಖಕಿಯಾಗುವ ಕನಸು ಕಂಡವಳು. 1990ರ ಇಸವಿ, ಒಂದು ದಿನ ಮ್ಯಾಚೆಸ್ಟರನಿಂದ ಲಂಡನ್‌ಗೆ ಬರುವ ರೈಲಿನಲ್ಲಿ ತಡವಾಗಿ ನಾಲ್ಕು ಗಂಟೆ ಸಿಕ್ಕಿಕೊಂಡಾಗ ರೌಲಿಂಗ್, ಪುಟ್ಟ ಹುಡುಗ ಹ್ಯಾರಿ ಪಾಟರನ ಪಾತ್ರವನ್ನು ಕಲ್ಪಿಸಿಕೊಂಡಳು. ಮುಂದಿನ ಐದು ವರ್ಷಗಳ ಕಾಲ ಹ್ಯಾರಿ ಪಾಟರ್ ಕುರಿತ ಮೊದಲ ಪುಸ್ತಕದ ಮೇಲೆ ಕೆಲಸ ಮಾಡಿದಳು. ಈ ನಡುವೆ ಪೋರ್ಚುಗಲ್‌ಗೆ ಪಾಠ ಹೇಳಿಕೊಡಲು ಹೋದ ರೌಲಿಂಗ್, ಅಲ್ಲಿ ಓರ್ವ ಪೋರ್ಜುಗೀಸ್ ಪತ್ರಿಕೋದ್ಯಮಿಯೊಡನೆ ವಿವಾಹವಾದಳು. ಮಗಳು ಜೆಸ್ಸಿಕಾ ಹುಟ್ಟುವ ಹೊತ್ತು ಮದುವೆ ಮರಿದು ಬಿತ್ತು. ಮೂರು ತಿಂಗಳ ಮಗುವನ್ನು ಹೊತ್ತು ಬ್ರಿಟನ್ ಹಿಂತಿರುಗಿದ ರೌಲಿಂಗ್ ಬಳಿ ಕೆಲಸವಿರಲಿಲ್ಲ. ಅಪ್ಪಟ ದಾರಿದ್ರ್ಯದ ದಿನಗಳು. ಹೇಗಾದರೂ ಬದುಕಬೇಕಿದ್ದ ಈ ದಿನಗಳಲ್ಲಿ ರೌಲಿಂಗ್ ತನ್ನ ಹ್ಯಾರಿ ಪಾಟರ್ ಪುಸ್ತಕವನ್ನು ಮುಗಿಸುವ ಛಲ ಹೊತ್ತಳು. ಕೊರೆವ ಚಳಿಯ ತನ್ನ ಫ್ಲಾಟಗೆ ಹೋಗಲಾರದೆ, ಪುಟ್ಟ ಮಗಳನ್ನು ಹೊತ್ತು ಎಡಿನಬರ್ಗ್ ಬೀದಿಗಳಲ್ಲಿ ಅಲೆದಾಡಿ ಯಾವುದೋ ಒಂದು ಅಗ್ಗದ ಕೆಫೆ ಹೊಕ್ಕು, ಬೆಚ್ಚನೆ ಕೆಫೆಯಲ್ಲಿ ಕೆಲವು ಗಂಟೆಗಳು ಕುಳಿತು ಬರೆಯುತ್ತಿದ್ದಳು. ಕಡೆಗೂ ಕತೆ ಬರೆದು ಮುಗಿಸಿ, ಜೆರಾಕ್ಸ್ ಮಾಡಿಸುವಷ್ಟು ಹಣವಿಲ್ಲದ ಕಾರಣ, ಎರಡು ಪ್ರತಿ ಟೈಪ್ ಮಾಡಿ, ಇಬ್ಬರು ಪ್ರಕಾಶಕರಿಗೆ ಕಳುಹಿಸಿದಳು. ಉಳಿದದ್ದೆಲ್ಲ ಇದೀಗ ಚರಿತ್ರೆಯಾಗಿದೆ. ಬಾಲ್ಯವನ್ನು ರೌಲಿಂಗ, ತನ್ನದೇ ಅಂತರಂಗದ ಕನಸಿನ ಲೋಕದಲ್ಲಿ ಕಳೆದವಳು. ಚಿಕ್ಕ ವಯಸ್ಸಿಗೇ ಲೇಖಕಿಯಾಗುವ ಆಸೆ ಮೂಡಿತ್ತು. ಆರನೇ ವರ್ಷದಲ್ಲಿಯೇ ಕತೆ ಬರೆಯಲು ಆರಂಭಿಸಿದ ರೌಲಿಂಗ್, ಒಂಬತ್ತನೇ ವಯಸ್ಸಿಗೆ ಐಯಾನ್ ಫ್ಲೆಮಿಂಗ್ ಪುಸ್ತಕಗಳನ್ನು ಓದಿ ಮುಗಿಸಿದ್ದಳು. ಜೇನ್ ಆಸ್ಟಿನ್ ಆಕೆಯ ಅಚ್ಚುಮೆಚ್ಚಿನ ಲೇಖಕಿ. ಮಕ್ಕಳಿಗೆ ಕನಸಿನ ಕಲ್ಪನಾ ಲೋಕಕ್ಕೆ ಬಾಗಿಲು ತೆರೆದ ರೌಲಿಂಗ್ ಇದೀಗ ಮಕ್ಕಳ ಸಾಹಿತ್ಯದಲ್ಲಿ ದೊಡ್ಡ ಬಿರುಗಾಳಿಯನ್ನೇ ತಂದಿದ್ದಾಳೆ.

## ರಾಗಿ ಮುದ್ದೆಗಾಗಿ ಪ್ರಾಣ ತೆಗೆದ ಪತಿ

ಹೆಣ್ಣಿನ ಜೀವ ಎಷ್ಟು ಅಗ್ಗವಾಗಿದೆ ಎಂದರೆ ಅದನ್ನು ತೆಗೆಯಲು ಒಂದು ರಾಗಿ ಮುದ್ದೆ ಕೂಡ ನೆಪವಾಗುತ್ತದೆ. ರಾಗಿ ಮುದ್ದೆ ಮಾಡಲಿಲ್ಲವೆಂದು ಪತ್ನಿಯೊಂದಿಗೆ ಜಗಳವಾಡಿ ಮಂಡ್ಯದ ರಂಗಸ್ವಾಮಿ, ನಾಗರತ್ನಳನ್ನು ಕೊಲೆ ಮಾಡಿದ. ಗಂಡನ ಸಿಟ್ಟು ಸೆಡವು, ಭುಗಿಲೇಳುವ ಕೋಪ ಇವುಗಳನ್ನು ನಮ್ಮ ಸಮಾಜ ಪೌರುಷದ ಕುರುಹಾಗಿ ಬೆಳೆಸಿ ಪೋಷಿಸುತ್ತದೆ. ಗಂಡು ಮಕ್ಕಳಿಗೆ ಚಿಕ್ಕಂದಿನಿಂದ ತಮ್ಮ ವಿಪರೀತದ ಭಾವನೆಗಳನ್ನು, ಕೋಪವನ್ನು ಹದ್ದುಬಸ್ತಿನಲ್ಲಿಟ್ಟುಕೊಳ್ಳುವುದನ್ನು ಹೇಳೀಕೊಟ್ಟಿಲ್ಲ ಎಂಬ ಅನುಮಾನ ಮೂಡುತ್ತದೆ. ಹೆಣ್ಣಿಗೆ ಸಹನೆ ಸಂಯಮವನ್ನು ಅಗಾಧವಾಗಿ ಬೋಧಿಸುವ ಸಮಾಜ, ಗಂಡಿನ ಸಿಟ್ಟನ್ನು ಅಪರೋಕ್ಷವಾಗಿ ಪ್ರೋತ್ಸಾಹಿಸುತ್ತದೆ. ನಮ್ಮ ಸಿನೆಮಾ ನಾಯಕರೆಲ್ಲ ಯಾವುದೋ ಒಂದು ನೆಪ ಇಟ್ಟು ಕೊಂಡ ಪ್ರಚಂಡ ಕೋಪಿಷ್ಠರೆ. 'ಆಂಗ್ರಿ ಯಂಗ್ ಮ್ಯಾನ್' ಇಮೇಜನಲ್ಲಿ ವಿಜೃಂಭಿಸಿದವರೆ. ಸಾತ್ವಿಕ ಗುಣದ ಮಾದರಿಗಳನ್ನು ನಮ್ಮ ಗಂಡು ಮಕ್ಕಳು ಎದುರು ಇಡಬೇಕಾದ ಅಗತ್ಯ ಎಂದಿಗಿಂತಲೂ ಇಂದು ಹೆಚ್ಚಿದೆ.

# ದೂರು ಪೆಟ್ಟಿಗೆಯಿಂದೇನು ಪ್ರಯೋಜನ ?

ದುಡಿಯುವ ಮಹಿಳೆಯರಿಗೆ ನ್ಯಾಯ ದೊರಕಿಸುವ ದಿಸೆಯಲ್ಲಿ ಮೂರು ವರ್ಷಗಳ ಹಿಂದೆಯೇ ಸರ್ವೋಚ್ಚ ನ್ಯಾಯಾಲವು ನೀಡಿದ ನಿರ್ದೇಶನಗಳನ್ನು ಜಾರಿಗೆ ತರುವಲ್ಲಿ ಸರ್ಕಾರಿ, ಅರೆ ಸರ್ಕಾರಿ ಹಾಗೂ ಖಾಸಗಿ ಮಾಲೀಕರು ಹಿಂದೆ ಬಿದ್ದಿದ್ದಾರೆ. ಅದರ ಫಲಶ್ರುತಿಯೆಂದರೆ ನೋವಿಗೀಡಾದ ಮಹಿಳೆಗೆ ಯಾವುದೇ ಪರಿಹಾರ ಸಿಗದಿರುವುದು.

ಕಳೆದ ವರ್ಷ, ರಾಜ್ಯಸಾರಿಗೆ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದ ಮಹಿಳಾ ಕಂಡಕ್ಟರ್ ಸವಿತಾ ನಾಯಕ್‌ಳ ಮೇಲಾದ ದೌರ್ಜನ್ಯವನ್ನು ಪ್ರತಿಭಟಿಸಿ ಅವಳಿಗೆ ನ್ಯಾಯ ದೊರಕಿಸಿಬೇಕೆಂದು ಮತ್ತು ರಾಜ್ಯ ಸಾರಿಗೆ ಸಮಿತಿಯಲ್ಲಿ 'ದೂರು ವಿಚಾರಣಾ ಸಮಿತಿ'ಯೊಂದನ್ನು ರಚಿಸಬೇಕೆಂದು ಒತ್ತಾಯಿಸಿ ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ಸದಸ್ಯೆಯರು ಸಾರಿಗೆ ಮಂತ್ರಿ ಸಗೀರ್ ಅಹಮದ್‌ರನ್ನು ಭೇಟಿಯಾಗಲು ಹೋಗಿದ್ದೆವು. ಅವರೊಡನೆ ನಮಗಾದ ಅನುಭವ. ನಮ್ಮ ಶಾಸಕ ಮಹಾಶಯರು ಲಿಂಗನ್ಯಾಯದ ವಿಷಯದಲ್ಲಿ ಎಷ್ಟೊಂದು insensitive ಆಗಿ ಚಿಂತಿಸಬಲ್ಲರು ಎಂಬುದಕ್ಕೆ ಒಂದು ನಿದರ್ಶನ. 'ದೂರು ವಿಚಾರಣಾ ಸಮಿತಿ'ಯನ್ನು ರಚಿಸಲು ಒತ್ತಾಯಿಸಿದ್ದಕ್ಕೆ ಅದರಿಂದೇನು ಪ್ರಯೋಜನ ? ನಮ್ಮ ದೂರು ಪೆಟ್ಟಿಗೆಯಲ್ಲಿ ನೂರಾರು ದೂರುಗಳು ಬರುತ್ತವೆ. ಅವೆಲ್ಲ ಕಸದ ಬುಟ್ಟಿಗೆ ಹೋಗುತ್ತವೆ. ಅದರಿಂದ ಮಹಿಳೆಯರಿಗೇನು ಪ್ರಯೋಜನ ?' ಎಂದು ಅಜ್ಞರಾಗಿ ಉತ್ತರಿಸಿದರು. ನಮ್ಮ ಮನವಿಯಲ್ಲಿದ್ದ ಸುಪ್ರೀಂಕೋರ್ಟ್ ಹೇಳಿದ ದೂರು ವಿಚಾರಣೆ ಸಮಿತಿಯ ಸ್ವರೂಪದ ಬಗ್ಗೆ ಇದ್ದ ಮಾಹಿತಿಯನ್ನಾಗಲೀ, ಅದರೊಂದಿಗೆ ಲಗತ್ತಿಸಿದ್ದ ಸುಪ್ರೀಂಕೋರ್ಟಿನ ತೀರ್ಪಿನ ವಿವರಗಳ ಪ್ರತಿಯನ್ನಾಗಲಿ ನೋಡುವ ವ್ಯವಧಾನವೂ ಆ ಸಚಿವರಿಗೆ ಇರಲಿಲ್ಲ. ಅಲ್ಲದೆ ಭಾರತೀಯ ಮಹಿಳೆ ಹೇಗೆ ವಿಶ್ವಮಾನ್ಯಳು. ಅವಳ ಘನತೆಯನ್ನು ಕುಗ್ಗಿಸುವಂತಹ ಕೆಲಸವಾಗಬಾರದು ಎಂದು ನಮಗೇ ಉಪದೇಶ ಮಾಡಿದರು.

ಮಹಿಳೆಯರನ್ನು ಕುರಿತು ಈ ಧೋರಣೆ ಕೇವಲ ಸಾರಿಗೆ ಮಂತ್ರಿಗೆ ಮಾತ್ರ ಅನ್ವಯಿಸುವಂತಹುದೆಂದು ಸುಮ್ಮನೆ ಕೂರಬೇಕಾಗಿಲ್ಲ. ರಾಜ್ಯ ಸಾರಿಗೆ ಸಂಸ್ಥೆಯಲ್ಲಿ ಇಂತಹ ಪ್ರಕರಣಗಳು ಮೇಲಿಂದ ಮೇಲೆ ನಡೆಯುತ್ತಲೇ ಇವೆ. ಅಲ್ಲಿ ನಮ್ಮ ಬೇಡಿಕೆಯಂತೆ ರಚಿತವಾದ 'ಮಹಿಳೆಯರ ದೂರು ಸಮಿತಿ'ಯು ಕಾರ್ಮಿಕ ಮಹಿಳೆಯರ ಹಿತಕಾಯುವುದಕ್ಕಿಂತ ವ್ಯವಸ್ಥೆಯ ಸೂತ್ರದಲ್ಲಿಯೇ ಸಿಕ್ಕಿ ಬಿದ್ದಿದೆ.

ಈ ಸಂಸ್ಥೆಯಲ್ಲಿ ನಡೆದ ಮತ್ತೊಂದು ಪ್ರಕರಣದಲ್ಲಿ ಅನ್ಯಾಯಕ್ಕೊಳಗಾದ ಮಹಿಳೆಗೆ ಅಧಿಕಾರಶಾಹಿ ತೋರಿಸಿದ ಧೋರಣೆ ಸ್ಪಷ್ಟವಾಗಿ ಪ್ರಕಟವಾಗಿದೆ. ರಾಜ್ಯ ಸಾರಿಗೆ ಸಂಸ್ಥೆಯಲ್ಲಿ ಸಹಾಯಕಿ ಹುದ್ದೆಯಲ್ಲಿ ಕೆಲಸ ಮಾಡುತ್ತಿರುವ ರಮಾದೇವಿಗೆ ಕೆಲವು ಪುರುಷ ಸಹೋದ್ಯೋಗಿಗಳಿಂದ ಕಿರುಕುಳ, ಅವಾಚ್ಯ ಬೈಗುಳ -ಈ ಎಲ್ಲದರ ಜೊತೆಗೆ ತೊಂದರೆಕೊಡುವುದಾಗಿ ಬೆದರಿಕೆ. ತನ್ನ ಮೇಲಧಿಕಾರಿಗಳಿಗೆ ದೂರಿತ್ತು ಪೋಲೀಸರ ರಕ್ಷಣೆ ಕೋರಿ, ತನಗಾದ ಅನ್ಯಾಯಕ್ಕೆ ಪ್ರತಿಭಟಿಸಿ ನ್ಯಾಯ ಕೇಳಲು ಮಂತ್ರಿಗಳ ಬಳಿ ಹೋದಾಗ 'ನೀನು ಇಲ್ಲೇ ಇಷ್ಟು ಜೋರಾಗಿ ಮಾತಾಡ್ತಿ ಇನ್ನು ಆಫೀಸಲ್ಲಿ ಎಷ್ಟು ಮಾತಾಡಿರಬಹುದು' ಎಂದು ಆಪಾದಿಸಿದ್ದೂ ಅಲ್ಲದೆ 'ನೋಡಮ್ಮಾ ಬೇಕಾದ್ರೆ ನಿನ್ನ ಟ್ರಾನ್ಸ್‌ಫರ್ ಮಾಡ್ತಿನಿ. ಅವ್ರನ್ನ ಮಾತ್ರ ಏನೂ ಮಾಡಕ್ಕಾಗಲ್ಲ' ಎಂದಾಗ ನ್ಯಾಯ ನಿರೀಕ್ಷಿಸಿ ಹೋದವರಿಗೆ ಹೇಗಿರಬೇಡ! ಈ ಗಾಯಕ್ಕೆ ಬರೆ ಇಟ್ಟವರು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವೆ ಮೋಟಮ್ಮ. ರಮಾದೇವಿ ಅವರಲ್ಲಿ ದೂರು ಹೇಳಿ ನ್ಯಾಯ ಕೇಳಲು ಹೋದಾಗ ಈ ಸಚಿವೆ 'ಅಲ್ರೀ ಅಷ್ಟೊಂದು ತೊಂದ್ರೆ ಆಗ್ತಾ ಇದ್ರೆ ಕೆಲಸಕ್ಕೆ ರಾಜೀನಾಮೆ ಕೊಟ್ಟು ಮನೇಲಿದ್ದು ಮಕ್ಕಳನ್ನು ಆಡಿಸಿಕೊಂಡಿರಿ' ಎಂದು ನೀಡಿದ್ದು ದಿವ್ಯ ಸಲಹೆ.

ಇಂತಹ ಧೋರಣೆ ಸಮಾಜದ ಎಲ್ಲ ಕಛೇರಿ, ವಿಭಾಗಗಳಲ್ಲೂ ವಿಭಿನ್ನ ರೀತಿಯಲ್ಲಿ ಕಂಡು ಬರುತ್ತಲೇ ಇವೆ. ಚಿನ್ಮಯ ಮಿಷನ್ ಆಸ್ಪತ್ರೆ ಮತ್ತು ಅಂಬೇಡ್ಕರ್ ಮೆಡಿಕಲ್ ಕಾಲೇಜಿನಲ್ಲಿ ಕಂಡು ಬಂದ ಲೈಂಗಿಕ ಹಗರಣದ ಪ್ರಸಂಗಗಳು ಸೇವಾಕ್ಷೇತ್ರದಲ್ಲಿ ಉಂಟಾಗುವ ಹೊಸ ಸಮಸ್ಯೆಗಳ ಸ್ವರೂಪವನ್ನು ಬಯಲಿಗೆಳೆಯುತ್ತಿವೆ. ಈ ಎಲ್ಲದರ ಹಿನ್ನೆಲೆಯಲ್ಲಿ ದುಡಿಯುವ ಮಹಿಳೆಯರ ಸಮಸ್ಯೆಗೆ ಒಂದು ವ್ಯಾಪಕವಾದ ಅಧ್ಯಯನ ಮತ್ತು ಪರಿಹಾರದ ಅಗತ್ಯವನ್ನು ಯೋಜಿಸಿ ರೂಪಿಸಬೇಕಾದ ಅಗತ್ಯವಿದೆ.

- ಅಚಲ

## ಮತ್ತೆ ಸುದ್ದಿಯಲ್ಲಿ ಕಮಲಾ 'ಸುರಯ್ಯಾ'

ಕಮಲಾ ದಾಸ್, ಕಮಲಾ ಸುರಯ್ಯಾ ಆಗಿ ಕೇವಲ ಎಂಟು ತಿಂಗಳು. ಬುರ್ಕಾ ಹಾಕಿಕೊಂಡೊಡನೆ ಒಳಗಿನ ಕಮಲಾ ಬದಲಾಗಲು ಸಾಧ್ಯವೇ? ಮತಾಂತರವಾದ ಆರಂಭದಲ್ಲಿ ಇಸ್ಲಾಂ ಧರ್ಮವನ್ನು ಹೊಗಳಾಡಿ, ಹಿಂದೂ ಧರ್ಮವನ್ನು ತೆಗಳಾಡಿ, ಹಿಂದೂಗಳನ್ನು ಸಿಟ್ಟಿಗೇಳಿಸಿದ್ದ ಕಮಲಾ, ಈಗ ಮುಸ್ಲಿಮ್ ಬಾಂಧವರನ್ನು ಅಪ್ರಸನ್ನಗೊಳಿಸಿದ್ದಾರೆ. 'ನಾನು ನನ್ನ ಸ್ವಾತಂತ್ರವನ್ನು ಬಿಟ್ಟುಕೊಟ್ಟಿದ್ದೇನೆ. ಸ್ವಾತಂತ್ರ ನನ್ನನ್ನು ತೀರಾ 'ಷ್ಯಾಬಿ'ಯಾಗಿ ಮಾಡಿತ್ತು. ಇಸ್ಲಾಂ ಕಟ್ಟುನಿಟ್ಟಿನದು. ನಾನು ಅಲ್ಲಾನನ್ನು ನನ್ನ ಒಡೆಯನೆಂದು ಭಾವಿಸುತ್ತೇನೆ. ನಾನಾತನ ಅಡಿಯಾಳು' ಎಂದು ಸಾರಿದ್ದ ಕಮಲಾರವರ ಲೇಖನಿ ಅಷ್ಟು ಸುಲಭವಾಗಿ ಧರ್ಮದ ಕಟ್ಟುನಿಟ್ಟನ್ನಾಗಲಿ, ಬಂಧನವನ್ನಾಗಲಿ ಒಪ್ಪಿಕೊಳ್ಳುವುದುಂಟೆ. ಅವರ ಉತ್ಕಟ ಬರಹಗಳನ್ನು ಹತ್ತಿಕ್ಕುವುದು ಸ್ವತಃ ಕಮಲಾಗೂ ಸಾಧ್ಯವಾಗಿಲ್ಲ. 'ಪ್ರಿಯಕರನೇ ದೇವರಿಗಿಂತ ಮೇಲಿನವನು' ಎಂದು ಉತ್ಕಟ ಪ್ರೀತಿಯ ಕವನಗಳನ್ನು ಬರೆದು ಮುಸ್ಲಿಮ್ ಬಾಂಧವರ ಕೋಪಕ್ಕೆ ಗುರಿಯಾಗಿದ್ದಾರೆ. 'ನನಗೀಗ ನಗ್ನ ದೇಹವನ್ನು ಬರೆಯಲು ಸಾಧ್ಯವೇ ಇಲ್ಲ. ಇಸ್ಲಾಂ ಧರ್ಮದ ಪ್ರಕಾರ ಅದು ಹರಾಮ್' ಎಂದಿದ್ದ ಆಕೆಯ ಬೆರಳುಗಳು ಮತ್ತೆ ನಗ್ನ ಸ್ತ್ರೀಯರ ಚಿತ್ರಗಳನ್ನು ಬಿಡಿಸುತ್ತಿವೆ. ಹೆಣ್ಣೊಬ್ಬಳು 'ಮೈ ಸ್ಟೋರಿ'ಯಂಥಾ ನಾನ್ಸೆನ್ಸ್ ಬರೆಯಲು ಧರ್ಮ ಬಿಡಬಾರದು' ಎಂದು ಘೋಷಿಸಿದ್ದ ಕಮಲಾ ಈಗ ಮತ್ತೊಂದೇ ಹಾಡು ಹಾಡುತ್ತಿದ್ದಾರೆ. 'ನಾನು ವಯಸ್ಸಾದ ಮುಸ್ಲಿಮ್ ಮಹಿಳೆಯಂತೆ ದಿನವೆಲ್ಲ ಪ್ರಾರ್ಥನೆಯಲ್ಲಿ ಕಳೆಯುತ್ತೇ, ಪ್ರೀತಿ ಸೌಂದರ್ಯದ ಬಗ್ಗೆ ಮಾತನಾಡದೆ ತೆಪ್ಪಗಿರುತ್ತೇನೆ ಎಂದು ಭಾವಿಸಿದ್ದರು. ನಾನಿದಕ್ಕೆಲ್ಲ ಬಾಗುವವಳಲ್ಲ' ಎಂದು ದೂರುತ್ತಿದ್ದಾರೆ. ಅದೇ ಉಸುರಿನಲ್ಲಿ 'ತಾನು ನಿಜವಾದ ಮುಸ್ಲಿಮಳಂತೆ ದಿನಕ್ಕೆ ಐದು ಬಾರಿ ನಮಾಜ್ ಮಾಡುತ್ತೇನೆ, ಪ್ರತಿ ರಾತ್ರಿ ಮೂರು ಗಂಟೆಗೆ ವಿಶೇಷ ಪ್ರಾರ್ಥನೆ ಸಲ್ಲಿಸುತ್ತೇನೆ' ಎಂದೂ ಹೇಳುತ್ತಾರೆ. ಇತ್ತೀಚೆಗೆ ಕೆನಡಾಗೆ ಹೋದ ಕಮಲಾ ಸುರಯ್ಯಾ ಹನ್ನೆರಡು ಪ್ರೇಮಗೀತೆಗಳನ್ನು ಬರೆದು. ಗಂಡಿನತ್ತಲ ಹೆಣ್ಣಿನ ಉತ್ಕಟ ಪ್ರೀತಿಯ ಈ ಕವಿತೆಗಳನ್ನು ಕಮಲಾ ಸದ್ಯಕ್ಕೆ ಭಾರತದಲ್ಲಿ ಪ್ರಕಟಿಸುತ್ತಿಲ್ಲ. ಆಕೆಯ ಆತ್ಮ ಚರಿತ್ರೆ 'ಮೈ ಸ್ಟೋರಿ'ಯನ್ನು ಕೆನಾಡಾ ಫಿಲ್ಮ್ ಕಂಪನಿಯೊಂದು ಚಲನಚಿತ್ರವಾಗಿಸುತ್ತಿದೆ. ಇದರಲ್ಲಿ ಸುರಯ್ಯಾ ಕೆಲ ನಿಮಿಷಗಳು ಕಾಣಿಸಿಕೊಳ್ಳುತ್ತಾರೆ. ಎಂಟು ತಿಂಗಳ ಹಿಂದೆ 'ಮೈ ಸ್ಟೋರಿ'ಯನ್ನು 'ನಾನ್ಸೆನ್ಸ್' ಎಂದು ಬಿಸುಟು ಈ ಲೇಖಕಿಗೆ ಅದು ಚಲನಚಿತ್ರವಾಗುತ್ತಿದ್ದಂತೆ ಅದರಲ್ಲಿಯೇ 'ಸೆನ್ಸ್' ಕಂಡಿರಬೇಕು.

## ಸಾವಿರ ಮೈಲಿ ಹಾದು ಬಂದ ಇಂಗ್ಲಿಷ್ ಮಹಿಳೆ

ಇಂಗ್ಲಿಷ್ ಸ್ಕೂಲ್ ಟೀಚರ್ ಆನ್ನಾ ಲಿಯನೋವೆನ್ಸ್, ವಿಕ್ಟೋರಿಯನ್ ಯುಗದಲ್ಲಿ ಯಾವ ಹೆಂಗಸೂ ಮಾಡದಿದ್ದ ಸಾಹಸವನ್ನು ಮಾಡಿದಾಕೆ. ಎಳೆಯ ವಿಧವೆ ಆನ್ನಾ, ತನ್ನ ಪುಟ್ಟ ಮಗನೊಡನೆ ಸಾವಿರಾರು ಮೈಲಿಗಳು ಪಯಣಿಸಿ ಥೈಲಾಂಡಗೆ ಬಂದಳು. ರಾಜ ಮಾಂಗ್ಕಟನ 58 ಮಕ್ಕಳಿಗೆ ಪಾಠ ಹೇಳಿಕೊಡಲು ಆನ್ನಾಳನ್ನು ನೇಮಿಸಲಾಯಿತು. ಪೂರ್ವದೇಶದ ಈ ರಾಜ ಅನಾಗರೀಕ ಎಂದು ಆನ್ನಾ ಭಾವಿಸಿದ್ದರೆ, ಪಶ್ಚಿಮದ ಈ ಹೆಂಗಸಿನ ಬಗ್ಗೆ ರಾಜನಿಗೆ ತನ್ನದೇ ಆದ ಪೂರ್ವಾಗ್ರಹಳಿದ್ದವು. ಆದರೆ ಸಮಯ ಕಳೆದಂತೆ ಆನ್ನಾ ಮತ್ತು ರಾಜನ ನಡುವೆ ಒಂದು ವಾತ್ಸಲ್ಯದ ಸಂಬಂಧ ಏರ್ಪಟ್ಟು, ಆನ್ನಾ ಈ ರಾಜ ತನ್ನ ಪ್ರಜೆಗಳ ಹಿತಾಸಕ್ತಿಯನ್ನು ಕಾಯುವ ನಿಜವಾದ ದಾರ್ಶನಿಕ ಎಂದು ಅರಿಯುತ್ತಾಳೆ. ಪಶ್ಚಿಮದ ಈ ಹೆಣ್ಣು ತನ್ನ ದೇಶಕ್ಕೆ ನಿಜವಾದ ಬೆಳಕನ್ನು, ಕಲಿಕೆಯ ಬೆಳಕನ್ನು ತಂದದ್ದನ್ನು ರಾಜ ಗುರುತಿಸುತ್ತಾನೆ ಚರಿತ್ರೆಯ ಈ ಸುಂದರ ಕತೆ 'ಆನ್ನಾ ಆಂಡ್ ದಿ ಕಿಂಗ್' ಚಲನಚಿತ್ರವಾಗಿ ಮೂಡಿ ಬಂದಿದೆ.

## ಭೂಪ್ರದಕ್ಷಿಣೆಗೆ ಹೊರಟ ಅರವತ್ತರ ಅಜ್ಜಿ

ಅರವತ್ತನೇಯ ವಯಸ್ಸಿನಲ್ಲಿ ತಮ್ಮ ಮೊಮ್ಮಕ್ಕಳನ್ನು ಆಡಿಸಿಕೊಂಡು ತಮ್ಮ ಬದುಕು ಇಲ್ಲಿಗೇ ಮುಗಿಯಿತು ಎನ್ನುವ ಅಜ್ಜಿಯರೇ ಹೆಚ್ಚು. ಆದರೆ ಅರವತ್ತು ವಯಸ್ಸಿನ ಒಬ್ಬ ಅಜ್ಜಿ, ಒಂದು ಹೆಲಿಕಾಪ್ಟರಿನಲ್ಲಿ ಕುಳಿತು ಏಕಾಂಗಿಯಾಗಿ ಭೂಮಿಯನ್ನು ಪ್ರದಕ್ಷಿಣೆ ಹಾಕುತ್ತಿದ್ದಾಳೆ. ಜೆನಿಫರ್ ಮುರ್ರೆ ಅರವತ್ತು ವರ್ಷದ ಮಹಿಳೆ, ಭಾರತದ ಮೂಲಕ ತಮ್ಮ ಹೆಲಿಕಾಪ್ಟರಿನಲ್ಲಿ ಹಾದು ಹೋದರು. ಈಕೆ 1997ರಲ್ಲಿ, ಓರ್ವ ಸಹಚಾಲಕನೊಡನೆ ಭೂ ಪ್ರದಕ್ಷಿಣೆ ಹಾಕಿದ್ದರು. ಇದೀಗ ಏಕಾಂಗಿಯಾಗಿ ಹೆಲಿಕಾಪ್ಟರಿನಲ್ಲಿ ಹೊರಟಿದ್ದಾರೆ. 'ಹಿರಿಯ ಮಹಿಳೆಯರಲ್ಲಿ ಉತ್ಸಾಹ ತುಂಬುವುದು ತನ್ನ ಪ್ರದಕ್ಷಿಣೆಯ ಒಂದು ಉದ್ದೇಶ' ಎನ್ನುವ ಜೆನಿಫರ್ 'ಮಕ್ಕಳ ಚಾರಿಟಿಗೆ 4.4 ಕೋಟಿ ರೂಪಾಯಿ ಹಣವನ್ನು ಎತ್ತುವುದು ಇದರ ಮತ್ತೊಂದು ಉದ್ದೇಶ' ಎನ್ನುತ್ತಾರೆ. 40,000 ಕಿಲೋಮೀಟರನ್ನು ಆವರಿಸುವ ಈಕೆಯ ಪಯಣ 33 ದೇಶಗಳನ್ನು ಮುಟ್ಟಿ ಸಾಗಲಿದೆ.

## ಎಲ್ಲಾ ಹಣಕ್ಕಾಗಿ

ಕಾರ್ಗಿಲ್ ಯುದ್ಧ ನಡೆದು ವರ್ಷದ ಮೇಲಾಯಿತು. ಆದರೆ ಸರಹದ್ದಿನಲ್ಲಿ ಸತ್ತ ಯೋಧರ ಕುಟುಂಬದಲ್ಲಿ ಆರಂಭವಾದ ಅಂತರಯುದ್ಧವಿನ್ನೂ ಮುಗಿದಿಲ್ಲ. ಗಂಡುಮಗನೆಂದರೆ 'ತಮ್ಮ ಭವಿಷ್ಯದ ಬಂಡವಾಳ' ಎಂದು ತಿಳಿಯುವ ಭಾರತೀಯ ಸಮಾಜದಲ್ಲಿ, 'ಮಗ ಸತ್ತು ಆತನ ಸಾವಿಗೆ ದೊರೆತ ಪರಿಹಾರ ಧನ ಸೊಸೆಗೆ ಹೋಗುವುದು' ಗಂಡು ಹೆತ್ತವರಿಗೆ ಅರಗಿಸಿಕೊಳ್ಳ ಲಾಗಿಲ್ಲ. ಸಾಕಿದ್ದು ತಾವು, ಹಾಗಾಗಿ ಹಣ ತಮಗೇ ಬರಬೇಕು, ಸೊಸೆಗೆ ಹಣ ಹೋಗಕೂಡದು ಎಂದು ಭೂಸೇನೆ ಕಾಯಿದೆಯನ್ನು ಬದಲಿಸುವಂತೆ ಬಲವಂತ ಪಡಿಸಿದ ಮಾತಾಪಿತೃಗಳೂ ಇದ್ದಾರೆ. ಹಣವನ್ನು ಸೊಸೆ ಮತ್ತು ತಾಯಿತಂದೆಯರ ನಡುವೆ ಭಾಗ ಮಾಡಬೇಕೆಂಬ ವಿಚಾರವನ್ನು ಭೂಸೇನೆ ಸಂಪೂರ್ಣ ನಿರಾಕರಿಸಿದೆ. 'ನಿಯಮವನ್ನು ಬದಲಾಯಿಸುವ ಪ್ರಶ್ನೆಯೇ ಇಲ್ಲ, ಸೊಸೆಯನ್ನು ಮಗಳಂತೆ ನೋಡಿಕೊಳ್ಳಿ, ಆಕೆ ಮನೆ ಬಿಟ್ಟು ಹೋಗುವುದಿಲ್ಲ' ಎಂದು ಸಾರಿದೆ. ಸುಮಾರು 20ರಿಂದ 28 ಲಕ್ಷದಷ್ಟು ಹಣ ದೊರೆಯುತ್ತಿರುವ ಸಂದರ್ಭದಲ್ಲಿ ಭೂಸೇನೆ ಸಾಕಷ್ಟು ವಿಚಾರ ಮಾಡಿದೆ. 'ರಾಜಾಸ್ತಾನ, ಹರಿಯಾಣ, ಉತ್ತರ ಪ್ರದೇಶದ ಕೆಲವು ಕಡೆ, ಸತ್ತ ಯೋಧನ ತಾಯಿ ತಂದೆಯರು ಸೊಸೆಯನ್ನು ಸರಿಯಾಗಿ ನೋಡಿಕೊಳ್ಳುತ್ತಿರಲಿಲ್ಲ, ಹಣ ಹುಡುಗಿಯ ಕೈಗೆ ಬಂದೊಡನೆ ಅವರ ಮನೋಭಾವ ತಟ್ಟನೆ ಬದಲಾಯಿತು. ಮಕ್ಕಳೊಂದಿಗಿರುವ ವಿಧವೆ ಹೆಣ್ಣು, ಭವಿಷ್ಯವನ್ನು ಎದುರಿಸಬೇಕಿದೆ. ಭೂಸೇನೆಯ ಕಾಯಿದೆಯ ಪ್ರಕಾರ ಅವಿವಾಹಿತ ಯೋಧನ ಉತ್ತರಾಧಿಕಾರಿ ಆತನ ತಾಯಿ, ವಿವಾಹಿತ ಯೋಧನ ಉತ್ತರಾಧಿಕಾರಿ ಆತನ ಪತ್ನಿ, ಯಾವುದೇ ಕಾರಣಕ್ಕೂ ಈ ಕಾಯಿದೆಯನ್ನು ಬದಲಿಸುವುದಿಲ್ಲ' ಎಂದು ಭೂಸೇನೆ ಸ್ಪಷ್ಟ ಪಡಿಸಿದೆ.

ತಟ್ಟನೆ ಕೈಸೇರಿದ ವಿಪರೀತದ ಹಣ ಕೌಟುಂಬಿಕ ಕದನಕ್ಕೆ ಕಾರಣವಾಗಿರುವುದಷ್ಟೇ ಅಲ್ಲ, ಹೆಣ್ಣಿನ ಜೀವಕ್ಕೇ ಕುತ್ತಾಗಿದೆ. ಉತ್ತರ ಪ್ರದೇಶದ 21 ವರ್ಷದ ಶಿವಕುಮಾರಿ ನಾಲ್ಕು ವರ್ಷದ ಹಿಂದೆ ಭೂಸೇನೆಯ ಜವಾನ್ ರಾಮ್ ನಿಹೋರಾನನ್ನು ವಿವಾಹವಾಗಿದ್ದಳು. ಪತಿ ಕಾರ್ಗಿಲ್‌ನಲ್ಲಿ ಸತ್ತು ಈಕೆಗೆ 17 ಲಕ್ಷ ಪರಿಹಾರದ ಧನ ದೊರೆಯಿತು. ಪತಿಯ ಶವಸಂಸ್ಕರವಿನ್ನೂ ಮುಗಿದಿರಲಿಲ್ಲ, ಅದಾಗಲೇ ಮಾವ ಆ ಹಣವೆಲ್ಲ ತನಗೆ ಸೇರಬೇಕೆಂದು ತಾಕೀತು ಮಾಡಿದ. ಆದರೆ ಜಿಲ್ಲೆಯ ಅಧಿಕಾರಿಗಳು ಕಾನೂನಿನ ಪ್ರಕಾರ ಆ ಹಣಕ್ಕೆ ಶಿವಕುಮಾರಿ ಹಕ್ಕುದಾರಳು' ಎಂದಾಗ ಆತನ ಆಸೆಯ ಬಲೂನಿಗೆ ಸೂಜಿ ಚುಚ್ಚಿತು. ಶಿವಕುಮಾರಿ ತನ್ನ ತವರಿಗೆ ಹಿಂತಿರುಗಿದ್ದಳು. ಇಲ್ಲಿಂದ ಆರಂಭವಾಯಿತು. ಮಾವನ ನಿರಂತರ ಬೆದರಿಕೆ. ಗೂಂಡಾಗಳನ್ನು ಸೇರಿಸಿ ಶಿಕುಮಾರಿಯ ಕೊಲೆ ಮಾಡಿಸಿದ. ಹಣವೇ ಮೂಲವಾಗಿರುವ ಬದುಕಿನಲ್ಲಿ ಪತಿಯನ್ನು ಕಳೆದುಕೊಂಡ ಹೆಣ್ಣು ಮಕ್ಕಳೀಗ ತಮ್ಮ ಪ್ರಾಣವನ್ನೂ ಕಳೆದುಕೊಳ್ಳುವ ಭಯದಲ್ಲಿದ್ದಾರೆ. ಮತ್ತೊಬ್ಬ ಶಿವಕುಮಾರಿ ಸಾವನ್ನಪ್ಪುವ ಮೊದಲು ಸರಕಾರ, ಹುತಾತ್ಮರ ವಿಧವೆಯರ ಸುರಕ್ಷಣೆಗೆ ಕ್ರಮ ತೆಗೆದುಕೊಳ್ಳಬೇಕು.

## ನಿಮಗೆ ಗೊತ್ತೆ ?

*ಎಂಬತ್ತು ವರ್ಷದ ಫ್ರೆಡಾ ಬಿಸೆಂತಲ್ ಈಗಲೂ ಜರ್ಮನಿಯಲ್ಲಿ ಟ್ಯಾಕ್ಸಿ ಓಡಿಸುತ್ತಾರೆ ಯೂರೋಪಿನ ಅತಿ ವಯಸ್ಸಾದ ಮಹಿಳಾ ಟ್ಯಾಕ್ಸಿ ಡ್ರೈವರ್ ಈಕೆ!*

